KA / BG-GPO / 2515 / WPP-47 / 2006-2008




# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೨ | ಬೆಂಗಳೂರು, ಗುರುವಾರ, ನವೆಂಬರ್ ೮, ೨೦೦೭ (ಕಾರ್ತೀಕ ೧೭, ಶಕ ವರ್ಷ ೧೯೨೯) | ಸಂಚಿಕೆ ೪೪ |
|---|---|---|


## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಇಂಧನ ಸಚಿವಾಲಯ**

**ವಿಷಯ:** ಮೆ:: ನಾರಾಯಣಪುರ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್‌ನ 2 ಹಂತಗಳ ಸೊಮನಮರಡಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 125 ಎನ್‌ಸಿಇ 1996 (13) ದಿನಾಂಕ: 10.6.1997.
2) ಸರ್ಕಾರಿ ಆದೇಶ ಸಂಖ್ಯೆ: ಡಿಇ 198 ಎನ್‌ಸಿಇ 2004 ದಿನಾಂಕ: 22.6.2004.
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 169 ಎನ್‌ಸಿಇ 2006 ದಿನಾಂಕ: 31.3.2006.
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ: ಕೆಆರ್‌ಇಡಿ/06/ಸೊಮನಮರಡಿ/2005/820 ದಿನಾಂಕ: 7.4.2007.

**ಪ್ರಸ್ತಾವನೆ :**

ಓದಲಾದ (1) ರ ಆದೇಶದಲ್ಲಿ ಮೆ:: ನಾರಾಯಣಪುರ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ 12.00 ಮೆಗಾ ವ್ಯಾಟ್ ಸಾಮರ್ಥ್ಯದ ಸೊಮನಮರಡಿ ಕಿರುಜಲ ವಿದ್ಯುತ್ ಯೋಜನೆಯನ್ನು ರಾಯಚೂರು ಜಿಲ್ಲೆಯ ನಾರಾಯಣಪುರ ಬಲದಂಡೆ ಕಾಲುವೆಯಲ್ಲಿ (54.33 ಮತ್ತು 54.91 ಕಿ. ಮೀ.) ಹಂಚಿಕೆ ಮಾಡಲಾಗಿದೆ.

ಓದಲಾದ (2) ಮತ್ತು (3) ರ ಆದೇಶಗಳಲ್ಲಿ ಯೋಜನೆಯನ್ನು ತಲಾ 6 ಮೆಗಾ ವ್ಯಾಟ್‌ನಂತೆ 2 ಹಂತಗಳಲ್ಲಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ ಹಾಗೂ ಕಾಲಾವಕಾಶವನ್ನು ವಿಸ್ತರಿಸಲಾಗಿದೆ.

ಓದಲಾದ (4) ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ಕೋರಿರುವ ಹಿನ್ನೆಲೆಯಲ್ಲಿ ಸೊಮನಮರಡಿ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು ಮೊದಲನೆ ಹಂತದಲ್ಲಿ 6.00 ಮೆಗಾ ವ್ಯಾಟ್ ನಿಂದ 6.6 ಮೆಗಾ ವ್ಯಾಟ್ ಹಾಗೂ 2ನೇ ಹಂತದಲ್ಲಿ 6.00 ಮೆಗಾ ವ್ಯಾಟ್‌ನಿಂದ 7.2 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ:–

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 127 ಎನ್‌ಸಿಇ 2007, ಬೆಂಗಳೂರು, ದಿನಾಂಕ: 11ನೇ ಏಪ್ರಿಲ್ 2007.**

ಸರ್ಕಾರವು ಮೆ:: ನಾರಾಯಣಪುರ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ರಾಯಚೂರು ಜಿಲ್ಲೆಯ ನಾರಾಯಣಪುರ ಬಲದಂಡೆ ಕಾಲುವೆಯಲ್ಲಿ (54.33 ಮತ್ತು 54.91 ಕಿ. ಮೀ.) ಎರಡು ಹಂತಗಳಲ್ಲಿ ಹಂಚಿಕೆ ಮಾಡಲಾಗಿರುವ 12.00 ಮೆಗಾ ವ್ಯಾಟ್ ಸಾಮರ್ಥ್ಯದ ಸೊಮನಮರಡಿ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು

ಮೊದಲನೆ ಹಂತದಲ್ಲಿ 6.00 ಮೆಗಾ ವ್ಯಾಟ್ ನಿಂದ 6.6 ಮೆಗಾ ವ್ಯಾಟ್ ಹಾಗೂ 2ನೇ ಹಂತದಲ್ಲಿ 6.00 ಮೆಗಾ ವ್ಯಾಟ್‌ನಿಂದ 7.2 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.653

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ವಿಷಯ :** M/s Biomass Energy for Rural India Project (BERI) ಗೆ 250 ಕಿಲೊ ವ್ಯಾಟ್ ಸಾಮರ್ಥ್ಯದ ಎರಡು Biomass Gasifier ವಿದ್ಯುತ್ ಸ್ಥಾವರ ಸ್ಥಾಪನೆಗೆ ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಇಎನ್ 344 ಎನ್‌ಸಿಇ 2006 ದಿನಾಂಕ: 7.8.2006.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/03/ಬೆರಿ/07/1924 ದಿನಾಂಕ: 28.8.2007.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಆದೇಶದಲ್ಲಿ M/s Biomass Energy for Rural India Project (BERI) ಗೆ ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ತೊವಿನಕೆರೆ ಪಂಚಾಯತ್ ವ್ಯಾಪ್ತಿಯ ಕಬ್ಬಿಗೆರೆ ಕ್ಲಸ್ಟರ್‌ನಲ್ಲಿ 500 ಕಿಲೊ ವ್ಯಾಟ್ ಸಾಮರ್ಥ್ಯದ Biomass Gasifier ವಿದ್ಯುತ್ ಸ್ಥಾವರ ಸ್ಥಾಪನೆ ಮಾಡಲು ಹಾಗೂ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ಪಿ.ಪಿ.ಎ. ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು M/s Biomass Energy for Rural India Project (BERI) ಗೆ ತುಮಕೂರು ಜಿಲ್ಲೆಯ ಮಧುಗಿರಿ ಕ್ಲಸ್ಟರ್‌ನ ಬೋರಿಗುಂಟೆ, ರಂಗಾಪುರ ಗ್ರಾಮ ಪಂಚಾಯಿತಿಯಲ್ಲಿ 250 ಕಿಲೋ ವ್ಯಾಟ್ ಮತ್ತು ಸೀಬಿನಯನ ಪಾಳ್ಯ ಗ್ರಾಮ, ಕವಣದಾಳ ಗ್ರಾಮ ಪಂಚಾಯತಿಯಲ್ಲಿ 250 ಕಿಲೋ ವ್ಯಾಟ್ ಸಾಮರ್ಥ್ಯದ Biomass Gasifier ನ ಎರಡು ವಿದ್ಯುತ್ ಸ್ಥಾವರ ಸ್ಥಾಪನೆ ಮಾಡಲು ಹಾಗೂ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ಪಿ.ಪಿ.ಎ. ಮಾಡಿಕೊಳ್ಳಲು ಅನುಮತಿ ನೀಡಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ: –

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 246 ಎನ್‌ಸಿಇ 2007, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2007.**

M/s Biomass Energy for Rural India Project (BERI) ಗೆ ತುಮಕೂರು ಜಿಲ್ಲೆಯ ಮಧುಗಿರಿ ಕ್ಲಸ್ಟರ್‌ನ ಬೋರಿಗುಂಟೆ, ರಂಗಾಪುರ ಗ್ರಾಮ ಪಂಚಾಯಿತಿಯಲ್ಲಿ 250 ಕಿಲೋ ವ್ಯಾಟ್ ಮತ್ತು ಸೀಬಿನಯನ ಪಾಳ್ಯ ಗ್ರಾಮ, ಕವಣದಾಳ ಗ್ರಾಮ ಪಂಚಾಯತಿಯಲ್ಲಿ 250 ಕಿಲೋ ವ್ಯಾಟ್ ಸಾಮರ್ಥ್ಯದ Biomass Gasifier ನ (ಒಟ್ಟು 500 ಕಿಲೋ ವ್ಯಾಟ್ ಸಾಮರ್ಥ್ಯ) ಎರಡು ವಿದ್ಯುತ್ ಸ್ಥಾವರ ಸ್ಥಾಪನೆ ಮಾಡಲು ಹಾಗೂ ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ಪಿ.ಪಿ.ಎ. ಮಾಡಿಕೊಳ್ಳಲು ಈ ಕೆಳಗಿನ ನಿಬಂಧನೆಗೊಳಪಟ್ಟು ಅನುಮತಿ ನೀಡಲಾಗಿದೆ:–

1. ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ ಖರೀದಿ ಒಡಂಬಡಿಕೆಯನ್ನು ಮಾಡಿಕೊಳ್ಳುವುದು.
2. ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಅನುಮತಿ ಪಡೆದುಕೊಳ್ಳುವುದು.
3. ಎಲ್ಲೆಲ್ಲಿ ಶಾಸನ ಬದ್ಧ ಅನುಮತಿ ಅಗತ್ಯವೊ ಅದನ್ನು ಪಡೆದುಕೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1610

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ENERGY SECRETARIAT

**Sub**: Transfer of 31.2 MW Wind Power Capacity in favour of M/s Generacion Eolica India (P) Ltd.-reg.

**Read**:
1. Government order No: EN 398 NCE 2005 dated: 20.4.2006.
2. Government order No: EN 146 NCE 2007 dated: 17.5.2007.
3. Letter No: KRED/08/GEPL-EIL/2007/1845 dated: 8.8.2007 received from the Managing Director, Karnataka Renewable Energy Development Limited, Bangalore.

**PREAMBLE :**

In the Government Order dated: 20.4.2006 read at (1) above sanction has been accorded for implementation of 236.81 MW capacity Wind Power Project at Gadag district by M/s Enercon India Limited.

In the Government Order dated: 17.5.2007 read at (2) above sanction has been accorded for enhancement of allotted wind power capacity from 236.81 MW to 457.61 MW capacity Wind Power Project at Gadag district by M/s Enercon India Limited.

Now, the Managing Director, Karnataka Renewable Energy Development Limited, Bangalore in his letter dated: 8.8.2007 read at (3) above has recommended to the Government for transfer of 31.2 MW Wind Power Capacity in favour of M/s Generacion Eolica India (P) Ltd. from out of sanctioned 457.61 MW Wind Power Capacity of M/s Enercon India Limited at Kurtkoti, Horti, Kanavi, Mulgund, Gadag District.

The proposal has been examined at the Government level and hence the order: -

**Government Order No: EN 296 NCE 2007, Bangalore, Dated: 1st September 2007.**

Government accords approval for transfer of 31.2 MW Wind Power capacity in favour of M/s Generacion Eolica India (P) Ltd. from out of sanctioned 457.61 MW Wind Power Capacity of M/s Enercon India Limited at Kurtkoti, Horti, Kanavi, Mulgund, Gadag District.

The terms and conditions of the Government Order read at (1) above shall **IPSO FACTO** applicable.

By order and in the name of the Governor of Karnataka,

PR. 1611

**SURESH. B. KRISHNAPPANAVAR**
Under Secretary to Government,
Energy Department.

**Sub**: Transfer of 34.4 MW Wind Power Capacity in favour of M/s Hindustan Zinc Ltd.-reg.

**Read**:
1. Government order No: EN 398 NCE 2005 dated: 20.4.2006.
2. Government order No: EN 146 NCE 2007 dated: 17.5.2007.
3. Letter No: KRED/08/HZL-EIL/2007/1844 dated: 8.8.2007 received from the Managing Director, Karnataka Renewable Energy Development Limited, Bangalore.

**Preamble :**

In the Government Order dated: 20.4.2006 read at (1) above sanction has been accorded for implementation of 236.81 MW capacity Wind Power Project at Gadag district by M/s Enercon India Limited.

In the Government Order dated: 17.5.2007 read at (2) above sanction has been accorded for enhancement of allotted wind power capacity from 236.81 MW to 457.61 MW capacity Wind Power Project at Gadag district by M/s Enercon India Limited.

Now, the Managing Director, Karnataka Renewable Energy Development Limited, Bangalore in his letter dated: 8.8.2007 read at (3) above has recommended to the Government for transfer of 34.4 MW Wind Power Capacity in favour of M/s Hindustan Zinc Ltd. from out of sanctioned 457.61 MW Wind Power Capacity of M/s Enercon India Limited at Kurtkoti, Horti, Kanavi, Mulgund, Gadag District.

The proposal has been examined at the Government level and hence the order: -

**Government Order No: EN 295 NCE 2007, Bangalore, Dated: 1st September 2007.**

Government accords approval for transfer of 34.4 MW Wind Power capacity in favour of M/s Hindustan Zinc Ltd. from out of sanctioned 457.61 MW Wind Power Capacity of M/s Enercon India Limited at Kurtkoti, Horti, Kanavi, Mulgund, Gadag District.

The terms and conditions of the Government Order read at (1) above shall **IPSO FACTO** applicable.

By order and in the name of the Governor of Karnataka,

PR. 1612

**SURESH. B. KRISHNAPPANAVAR**
Under Secretary to Government,
Energy Department.

## ಇಂಧನ ಸಚಿವಾಲಯ

**ವಿಷಯ:** ಮೆ: ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಯ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಂಗಡಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು 18.9 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 392 ಎನ್‌ಸಿಇ 2006 ದಿನಾಂಕ: 17.3.2007.
2) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಹೊಂಗಡದಹಳ್ಳ/2007/1915 ದಿನಾಂಕ: 22.8.2007.

**ಪ್ರಸ್ತಾವನೆ :**

ಮೇಲೆ ಓದಲಾದ (1) ರ ಆದೇಶದಲ್ಲಿ ಮೆ:: ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಎಡಕುಮೇರಿ ಗ್ರಾಮದ ಬಳಿ ಕೆಂಪುಹೊಳೆಯ ಉಪ ನದಿಯಾದ ಹೊಂಗಡಹಳ್ಳ (ಹೊಂಗಡಹಳ್ಳ ಆಸುಪಾಸಿನಲ್ಲಿ) ನದಿಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಂಗಡಹಳ್ಳ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಓದಲಾದ (2) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಯೋಜನಾ ಸ್ಥಳದಲ್ಲಿ ಇನ್ನೂ ಹೆಚ್ಚಿನ ವಿದ್ಯುತ್ ಉತ್ಪಾದಿಸಬಹುದೆಂದು ಅಭಿವೃದ್ಧಿದಾರರು ಕೋರಿರುವ ಹಿನ್ನೆಲೆಯಲ್ಲಿ ಹೊಂಗಡಹಳ್ಳ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 5.00 ಮೆಗಾ ವ್ಯಾಟ್ ನಿಂದ 18.9 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡುವ ಬಗ್ಗೆ ಸರ್ಕಾರದ ಮಟ್ಟದಲ್ಲಿ ನಿರ್ಧಾರ ತೆಗೆದುಕೊಳ್ಳಲು ಅಭಿಪ್ರಾಯಿಸಿರುತ್ತಾರೆ.

ಮೇಲಿನ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 299 ಎನ್‌ಸಿಇ 2007, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2007.**

ಸರ್ಕಾರವು ಮೆ:: ಮಾರುತಿ ಪವರ್ ಜೆನ್ (ಇಂಡಿಯಾ) ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಾಸನ ಜಿಲ್ಲೆಯ ಸಕಲೇಶಪುರ ತಾಲ್ಲೂಕಿನ ಎಡಕುಮೇರಿ ಗ್ರಾಮದ ಬಳಿ ಕೆಂಪುಹೊಳೆಯ ಉಪ ನದಿಯಾದ ಹೊಂಗಡಹಳ್ಳ (ಹೊಂಗಡಹಳ್ಳ ಆಸುಪಾಸಿನಲ್ಲಿ) ನದಿಗೆ ಅಡ್ಡಲಾಗಿ ಹಂಚಿಕೆ ಮಾಡಿರುವ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಹೊಂಗಡಹಳ್ಳ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 18.9 ಮೆಗಾ ವ್ಯಾಟ್ ಸಾಮರ್ಥ್ಯಕ್ಕೆ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಓದಲಾದ (1) ರ ಮೂಲ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1613

**ಸುರೇಶ್. ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ENERGY SECRETARIAT

**Sub**: Transfer of 3.00 MW Wind Power Capacity (Wind Mill Project) in favour of M/s Renaissance Holdings & Developers (P) Limited-reg.

**Read**: 1. Government order No: DE 26 NCE 1999 dated: 13.5.1999.
2. Government order No: EN 102 NCE 2005 dated: 21.4.2005.
3. Letter No: KRED/08/RH&DPL-SEL/2007/2000 dated: 6.9.2007 received from the Managing Director, Karnataka Renewable Energy Development Limited, Bangalore.

**Preamble :**

In the Government Order dated: 21.4.2005 read at (2) above sanction has been accorded for implementation of 25.5 MW capacity Wind Power Project (Wind Mill Project) at Hassan district by M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated: 6.9.2007 read at (3) above has recommended to the Government for transfer of 3.00 MW Wind Power Capacity (Wind Mill Project) in favour of M/s Renaissance Holdings & Developers (P) Limited from out of sanctioned 25.5 MW Wind Power Capacity of M/s Suzlon Energy Limited at Belur region in Aidahalli Kavalu/Nayakanakerekavalu village, Belur Taluk, Hassan District.

The proposal has been examined at the Government level and hence the order:-

**GOVERNMENT ORDER NO: EN 319 NCE 2007, Bangalore, Dated: 6th September 2007.**

Government accords approval for transfer of 3.00 MW Wind Power capacity (Wind Mill Project) in favour of M/s Renaissance Holdings & Developers (P) Limited from out of sanctioned 25.5 MW Wind Power Capacity of M/s Suzlon Energy Limited at Aidahalli Kavalu/Nayakanakerekavalu village, Belur Taluk, Hassan District.

The terms and conditions of the Government Order read at (1) above shall **IPSO FACTO** applicable.

By order and in the name of the Governor of Karnataka,

PR. 1635

**SURESH. B. KRISHNAPPANAVAR**

Under Secretary to Government,

Energy Department.

**Sub**: Transfer of 3.00 MW Wind Power Capacity (Wind Mill Project) in favour of M/s Renaissance Holdings & Developers (P) Limited-reg.

**Read**:
1. Government order No: DE 26 NCE 1999 dated: 13.5.1999.
2. Government order No: EN 102 NCE 2005 dated: 21.4.2005.
3. Letter No: KRED/08/RH&DPL-SEL/2007/1898 dated: 24.8.2007 received from the Managing Director, Karnataka Renewable Energy Development Limited, Bangalore.

**Preamble :**

In the Government Order dated: 21.4.2005 read at (2) above sanction has been accorded for implementation of 25.5 MW capacity Wind Power Project (Wind Mill Project) at Hassan district by M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated: 24.8.2007 read at (3) above has recommended to the Government for transfer of 3.00 MW Wind Power Capacity (Wind Mill Project) in favour of M/s Renaissance Holdings & Developers (P) Limited from out of sanctioned 25.5 MW Wind Power Capacity of M/s Suzlon Energy Limited at Belur region in Aidahalli Kaval village, Hassan Taluk, Hassan District.

The proposal has been examined at the Government level and hence the order:

**Government Order No: EN 289 NCE 2007, Bangalore, Dated: 29th August 2007.**

Government accords approval for transfer of 3.00 MW Wind Power capacity (Wind Mill Project) in favour of M/s Renaissance Holdings & Developers (P) Limited from out of sanctioned 25.5 MW Wind Power Capacity of M/s Suzlon Energy Limited at Belur region in Aidahalli Kaval village, Hassan Taluk, Hassan District.

The terms and conditions of the Government Order read at (1) above shall **IPSO FACTO** applicable.

By order and in the name of the Governor of Karnataka,

PR. 1551

**SURESH. B. KRISHNAPPANAVAR**

Under Secretary to Government,

Energy Department.

**Sub**: Transfer of 1.5 MW Wind Power Capacity (Wind Mill Project) in favour of M/s Energy Development Company Ltd.-reg.

**Read**:
1. Government order No: DE 26 NCE 1999 dated: 13.5.1999.
2. Government order No: EN 102 NCE 2005 dated: 21.4.2005.
3. Letter No: KRED/08/EDCL-SEL/2007/1900 dated: 24.8.2007 received from the Managing Director, Karnataka Renewable Energy Development Limited, Bangalore.

**Preamble :**

In the Government Order dated: 21.4.2005 read at (2) above sanction has been accorded for implementation of 21.00 MW capacity Wind Power Project (Wind Mill Project) at Belur region in Koppalahalli village, Hassan district by M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated: 24.8.2007 read at (3) above has recommended to the Government for transfer of 1.5 MW Wind Power capacity (Wind Mill Project) in favour of M/s Energy Development Company Ltd. from out of sanctioned 21.00 MW Wind Power Capacity of M/s Suzlon Energy Limited at Belur region in Kopalahalli village, Hassan Taluk, Hassan District.

The proposal has been examined at the Government level and hence the order:

**Government Order No: EN 291 NCE 2007, Bangalore, Dated: 29th August 2007.**

Government accords approval for transfer of 1.5 MW Wind Power capacity (Wind Mill Project) in favour of M/s Energy Development Company Ltd. from out of sanctioned 21.00 MW Wind Power Capacity of M/s Suzlon Energy Limited at Belur region in Kopalahalli village, Hassan Taluk, Hassan District.

The terms and conditions of the Government Order read at (1) above shall **IPSO FACTO** applicable.

By order and in the name of the Governor of Karnataka,

PR. 1552

**SURESH. B. KRISHNAPPANAVAR**
Under Secretary to Government,
Energy Department.

**Sub:** Enhancement of allotted capacity of 25.5 MW to 51.00 MW Wind Power Project in favour of M/s Nuziveedu Seeds Limited-reg.

**Read:**
1. Government Order No: DE 168 NCE 2002 dated: 16.12.2002.
2. Government Order No: EN 270 NCE 2006 dated: 2.8.2006.
3. Letter No: KRED/08/NSL-Vol-II/07/1824 dated: 6.8.2007 received from the Managing Director, Karnataka Renewable Energy Development Limited, Bangalore.

**Preamble** :

In the Government Order read at (1) above, sanction has been accorded for implementation of 25.5 MW capacity Wind Power Project at Chitradurga District by M/s Evergreen Energies Limited.

In the Government Order read at (2) above permission has been accorded for the amalgamation of company M/s Evergreen Energies Limited with M/s Nuziveedu Seeds Limited.

The Managing Director, Karnataka Renewable Energy Development Limited, Bangalore, in his letter read at (3) above has recommended to Government to enhance the allotted wind power capacity from 25.5 MW to 51.00 MW in favour of M/s Nuziveedu Seeds Limited at Bharmanalkanadurga, Chikkavadatti and Hirekandwadi of Chitradurga District.

The proposal has been examined at the Government level and hence the order: -

**Government Order No: EN 276 NCE 2007, Bangalore, Dated: 29th August 2007.**

Government accords approval for enhancement of the allotted wind power capacity from 25.5 MW to 51.00 MW in favour of M/s Nuziveedu Seeds Limited as detailed below: -

| Areas located close by | Geographically sanctioned areas | Sanctioned capacities vide G.O. No: DE 168 NCE 2002 dated: 16.12.2002 | Proposed rating of WTG's | Enhancement of capacity proposed in Stage-1 | Total capacity including proposed enhancement |
|---|---|---|---|---|---|
| Bharmanalkanadurga Chikkavadatti and Hirekandwadi | A group of ridges with peaks 814, 887, 843, 824, 924 and 901 m elevations covered in **Latitude**: 14°8’30”- 13’30” N and **Longitude**: 76°8’15” E | 25.5 MW | 1500 KW | 25.5 MW | 51.00 MW |

The terms and conditions of the Government Order read at (1) above shall **IPSO FACTO** applicable.

By order and in the name of the Governor of Karnataka,

PR. 1553

**SURESH. B. KRISHNAPPANAVAR**
Under Secretary to Government,
Energy Department.

**Sub:** Enhancement of allotted capacity of 15.00 MW to 33.00 MW Wind Power Project in favour of M/s Nuziveedu Seeds Limited-reg.

**Read:**
1. Government Order No: EN 58 NCE 2004 dated: 20.2.2004.
2. Letter No: KRED/08/NSL-Vol-II/07/1823 dated: 6.8.2007 received from the Managing Director, Karnataka Renewable Energy Development Limited, Bangalore.

**Preamble** :

In the Government order read at (1) above the sanction has been accorded for implementation of 15.00 MW capacity Wind Power Project at Davangere District by M/s Nuziveedu Seeds Limited.

The Managing Director, Karnataka Renewable Energy Development Limited, Bangalore, in his letter read at (2) above has recommended to Government to enhance the allotted wind power capacity from 15.00 MW (6.00+9.00=15.00 MW i.e. serial No. 1 and 2 G.O.No: EN 58 NCE 2004 dated: 20.2.2004) to 33.00 MW in favour of M/s Nuziveedu Seeds Limited at Juglur, Davangere District.

The proposal has been examined at the Government level and hence the order: -

**Government Order No: EN 275 NCE 2007, Bangalore, Dated: 29th August 2007.**

Government accords approval for enhancement of the allotted wind power capacity from 15.00 MW to 33.00 MW in favour of M/s Nuziveedu Seeds Limited as detailed below: -

| Sl. No. | Taluk & District | Geographically sanctioned areas | Sanctioned capacities vide G.O. No: EN 58 NCE 2004 dated: 20.2.2004 | Proposed rating of WTG's | Enhancement of capacity proposed in Stage-1 | Total capacity including proposed enhancement |
|---|---|---|---|---|---|---|
| 1. | Juglur Davangere District | A ridges with 744 meter peak is in Jagalur SF located on the North west south east of Linganahalli village | 6.00 MW | 1500 KW | 18.00 MW | 33.00 MW |
| 2 | Juglur Davangere District | Group of ridges with peaks 796 M and 803 M in Ranganayanadurga SF located on the east of Gode village, Tarehalli and west of Kelagate | 9.00 MW | 1500 KW | | |

The terms and conditions of the Government Order read at (1) above shall **IPSO FACTO** applicable.

By order and in the name of the Governor of Karnataka,

PR. 1554

**SURESH. B. KRISHNAPPANAVAR**
Under Secretary to Government,
Energy Department.

**Sub:** Merger of the functions of State Power Procurement Co-ordination Committee (SPPCC) with Power Company of Karnataka Limited.

**Read:**
1) G.O. No.EN 138 PPC 2006 dated 7.4.2007.
2) G.O.No. EN 130 PPC 2006 dated 12.07.2007.
3) MD, KPTCL ltr. No. KPTCL/SA 3 / 3927 / 2005-06 dt.22.8.2007.

**Preamble**:

Government of Karnataka vide its G.O. read (1) above accorded approval to form a Special Purpose Vehicle (SPV) for carrying out the work of inviting tariff based bids and framing of business rules as done by Ministry of Power, Government of India by contributing Rs.1 Crore to SPV by each ESCOMs.

Further, Government of Karnataka vide its G.O. read (2) above accorded approval to take steps to incorporate the proposed Special Purpose Vehicle as a Government Company under the Companies Act 1956.

Managing Director, KPTCL vide letter read (3) above has informed that the certificate of incorporation of M/s. Power Company of Karnataka Limited as a Public Limited Government Company w.e.f. 20.08.2007 was obtained from the Registrar of Companies, Karnataka, Bangalore and requested to issue the Government Order for the following.

1. The SPPCC Cell be merged with PCKL and the employees working in SPPCC may be treated as on deputation from KPTCL to PCKL. Once the Board of PCKL meets, it will decide on the Organization Structure and all other related matters.
2. The Company Secretary, KPTCL may be authorized (Authorized Signatory of PCKL) to look after the secretarial functions of PCKL.

The proposal has been examined at the Government level and hence this order.

**Government Order No. EN 138 PPC 2006, Bangalore Dated 1st September 2007.**

Government here by accords approval for the following:

1. Managing Director, Karnataka Power Transmission Corporation Limited (KPTCL) is nominated as Chairman & Managing Director of Power Company of Karnataka Limited (PCKL).
2. The State Power Procurement Co-ordination Centre (SPPCC) Cell be merged with PCKL, the newly formed Special Purpose Vehicle and the functions of SPPCC be performed by PCKL.
3. The employees working in SPPCC may be treated as on deputation from KPTCL to PCKL.
4. The Company Secretary, KPTCL is authorized (Authorized Signatory of PCKL) to look after the secretarial functions of PCKL.

By order and in the name of the Governor of Karnataka,

PR. 1593

**SURESH B. KRISHNAPPANAVAR**

Under Secretary to Government,

Energy Department.

ಇಂಧನ ಸಚಿವಾಲಯ

**ವಿಷಯ:** ಮೆ: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಸಂಪೆಕಟ್ಟೆ ಕಿರು ಜಲ ವಿದ್ಯುತ್ ಯೋಜನೆಯನ್ನು ಮರು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಡಿಇ 66 ಎನ್‌ಸಿಇ 2001 ದಿನಾಂಕ: 29.11.2001.
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 357 ಎನ್‌ಸಿಇ 2005, ದಿನಾಂಕ: 1.7.2006.
3) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಸಂಪಕಟ್ಟೆ/2006/690 ದಿನಾಂಕ: 17.3.2007.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಮೆ:: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಸಂಪಕಟ್ಟೆ ಗ್ರಾಮದ ಹತ್ತಿರ ಚಕ್ರಾ ವಾಟರ್ ಕಂಡೆಕ್ಟಿಂಗ್ ಸಿಸ್ಟಮ್‌ಗೆ ಹೊಂದಿಕೊಂಡಂತೆ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಸಂಪಕಟ್ಟೆ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ (2)ರ ಆದೇಶದಲ್ಲಿ ಯೋಜನೆ ಹಂಚಿಕೆಯಾಗಿ 4 ವರ್ಷ ಕಳೆದರೂ ಅಭಿವೃದ್ಧಿದಾರರು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಯಾವುದೇ ಪ್ರಗತಿಯನ್ನು ಸಾಧಿಸದ ಹಿನ್ನೆಲೆಯಲ್ಲಿ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಸಂಪಕಟ್ಟೆ ಕಿರು ಜಲ ವಿದ್ಯುತ್ ಯೋಜನೆಯನ್ನು ರದ್ದುಪಡಿಸಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೇಲಿನ ಕಂಪನಿಯು ಯೋಜನೆಯನ್ನು ಅನುಷ್ಠಾನ ಮಾಡಲು ಆಸಕ್ತರಾಗಿದ್ದು ಯೋಜನೆಯ ಅನುಷ್ಠಾನದ ನಿಟ್ಟಿನಲ್ಲಿ ಸಾಕಷ್ಟು ಪ್ರಗತಿ ಸಾಧಿಸಿದ್ದು ಯೋಜನೆಯನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಿಂದ ನಿರಾಕ್ಷೇಪಣೆ ಪಡೆದುಕೊಳ್ಳಬೇಕೆಂಬ ಷರತ್ತಿನೊಂದಿಗೆ ಹಂಚಿಕೆ ಮಾಡಬಹುದೆಂದು ಶಿಫಾರಸ್ಸು ಮಾಡಿರುತ್ತಾರೆ.

ಮೇಲಿನ ಶಿಫಾರಸ್ಸನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 58 ಎನ್‌ಸಿಇ 2007 (ಭಾಗ–1), ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2007.**

ಸರ್ಕಾರದ ಆದೇಶ ಸಂಖ್ಯೆ: ಇಎನ್ 357 ಎನ್‌ಸಿಇ 2005 ದಿನಾಂಕ: 1.7.2006 ರಲ್ಲಿ ಮೆ:: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಸಂಪಕಟ್ಟೆ ಗ್ರಾಮದ ಹತ್ತಿರ ಚಕ್ರಾ ವಾಟರ್ ಕಂಡೆಕ್ಟಿಂಗ್ ಸಿಸ್ಟಮ್‌ಗೆ ಹೊಂದಿಕೊಂಡಂತೆ 3.5 ಮೆಗಾ ವ್ಯಾಟ್ ಸಾಮರ್ಥ್ಯದ ಸಂಪಕಟ್ಟೆ ಕಿರು ಜಲ ವಿದ್ಯುತ್ ಯೋಜನೆಯ ಹಂಚಿಕೆ ಆದೇಶವನ್ನು ರದ್ದು ಪಡಿಸಿರುವುದನ್ನು ಸರ್ಕಾರ ಹಿಂದಕ್ಕೆ ಪಡೆದು ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕರ್ನಾಟಕ ವಿದ್ಯುತ್ ನಿಗಮ ನಿಯಮಿತದಿಂದ ನಿರಾಕ್ಷೇಪಣೆಯನ್ನು ಪಡೆದುಕೊಳ್ಳಬೇಕೆಂಬ ಷರತ್ತಿನೊಂದಿಗೆ ಮೆ:: ಫೋಟಾನ್ ಎನರ್ಜಿ ಸಿಸ್ಟಮ್ಸ್ ಲಿಮಿಟೆಡ್ ಕಂಪನಿಗೆ ಅನುಮತಿ ನೀಡಿದೆ.

ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1555

**ಸುರೇಶ್. ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಮಲ್ಲೇಶ್ವರಂ, ಬೆಂಗಳೂರು ಇದರ 2005–2006 ಮತ್ತು 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ಅವಧಿ ವಿಸ್ತರಣೆ ಬಗ್ಗೆ.

**ಓದಲಾಗಿದೆ :** ಅಧ್ಯಕ್ಷರು ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಮಲ್ಲೇಶ್ವರಂ, ಬೆಂಗಳೂರು ಇವರ ಪತ್ರದ ಸಂಖ್ಯೆ: ವಿಹೆಚ್‌ಬಿಸಿಎಸ್‌ಎಲ್/ದಿನಾಂಕ: 06–09–2007.

**ಪ್ರಸ್ತಾವನೆ :**

ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಮಲ್ಲೇಶ್ವರಂ ಬೆಂಗಳೂರು ಇದರ ಅಧ್ಯಕ್ಷರು ಸಂಘವು ಬೆಂಗಳೂರು ಉತ್ತರ ತಾಲ್ಲೂಕಿನಲ್ಲಿ 208 ಎಕರೆ ಭೂಮಿಯನ್ನು ಕಳೆದುಕೊಂಡಿದ್ದು ರಿಟ್ ಅರ್ಜಿ ಸಂಖ್ಯೆ: 13852–57/99ರಲ್ಲಿ ಶ್ರೇಷ್ಠ ನ್ಯಾಯಾಲಯವು ದಿನಾಂಕ: 28–5–2001ರಂದು ಸಂಘಕ್ಕೆ ಪರ್ಯಾಯ ಭೂಮಿಯನ್ನು ಒದಗಿಸುವಂತೆ ಕಂದಾಯ ಇಲಾಖೆಗೆ ನಿರ್ದೇಶನ ನೀಡಿದ್ದು ಇದುವರೆಗೆ ಸರ್ಕಾರದಿಂದ ಯಾವುದೇ ಕ್ರಮ ಕೈಗೊಂಡಿಲ್ಲವೆಂದೂ ವಾರ್ಷಿಕ ಮಹಾಸಭೆಯನ್ನು ನಡೆಸಲು ಕನಿಷ್ಠ ರೂ. 1.00 ಲಕ್ಷಗಳ ಅಗತ್ಯವಿದ್ದು ಸದರಿ ಹಣವನ್ನು ಸದ್ಯದ ಪರಿಸ್ಥಿತಿಯಲ್ಲಿ ಸಂಘವು ಭರಿಸಲು ಆಗುವುದಿಲ್ಲವೆಂದೂ ತಿಳಿಸಿ 2005–06 ಮತ್ತು 2006–07ನೇ ಸಾಲಿನ ಮಹಾಸಭೆಗಳನ್ನು ನಡೆಸಲು ದಿನಾಂಕ: 01–10–2007ರಿಂದ ಒಂದು ವರ್ಷದವರೆಗೆ ಕಾಲಾವಕಾಶ ನೀಡಬೇಕೆಂದೂ ಈ ಬಗ್ಗೆ ದಿನಾಂಕ: 31–07–2007ರಂದು ನಡೆದ ಸಂಘದ ಆಡಳಿತ ಸಮಿತಿಯ ಸಭೆಯಲ್ಲಿ ತೀರ್ಮಾನಿಸಲಾಗಿದೆಯೆಂದೂ ತಿಳಿಸಿ ಸಂಘದ 2005–2006 ಮತ್ತು 2006–07ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ದಿನಾಂಕ: 01–10–2007ರಿಂದ ಒಂದು ವರ್ಷದ ಕಾಲ ಮುಂದೂಡಲು ಅನುಮತಿ ನೀಡುವಂತೆ ಮೇಲೆ ಓದಲಾದ ಮನವಿಯಲ್ಲಿ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 208 ಸಿಎಲ್‌ಎಮ್ 2007, ಬೆಂಗಳೂರು, ದಿನಾಂಕ: 28ನೇ ಸೆಪ್ಟೆಂಬರ್ 2007**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಸರ್ಕಾರವು ವೈಯಾಲಿಕಾವಲ್ ಗೃಹ ನಿರ್ಮಾಣ ಸಹಕಾರ ಸಂಘ (ನಿ) ಮಲ್ಲೇಶ್ವರಂ ಬೆಂಗಳೂರು ಇದರ 2005–06ನೇ ಸಾಲಿನ ವಾರ್ಷಿಕ ಮಹಾಸಭೆಯನ್ನು ನಡೆಸಲು ದಿನಾಂಕ: 31–03–2008ರ ವರೆಗೆ ಕಾಲಾವಕಾಶ ನೀಡಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಗಳು ಕೆಳಗಿನ ಮಾರ್ಪಾಟಿನೊಂದಿಗೆ ಅನ್ವಯವಾಗುತ್ತದೆಂದು ನಿರ್ದೇಶಿಸುತ್ತದೆ ಎಂದರೆ:

**27ರ ಪ್ರಕರಣದಲ್ಲಿ:**

27ನೇ ಪ್ರಕರಣ ಉಪಪ್ರಕರಣ (1)ರ ಪರಂತುಕದಲ್ಲಿನ "ಆರು ತಿಂಗಳು" ಎಂಬ ಪದಗಳಿಗೆ ಬದಲಾಗಿ **"ಹದಿನೆಂಟು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ:** 1. ಪ್ರಕರಣ 27(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ: 31–3–2008ರ ವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 27(1)ರ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

2. 2006–07ನೇ ಸಾಲಿನ ಮಹಾಸಭೆಯನ್ನು ನಡೆಸಲು ದಿನಾಂಕ: 31–3–2008ರವರೆಗೆ ಕಾಲಾವಕಾಶವನ್ನು ಸಕ್ಷಮ ರಿಜಿಸ್ಟ್ರಾರರಿಂದ ಪಡೆಯತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1826

**ಆರ್.ಎಸ್. ಹುಚ್ಚಾಚಾರಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ

## ಕಾರ್ಮಿಕ ಸಚಿವಾಲಯ

**ವಿಷಯ:** ರಾಜ್ಯದ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಅತಿಥಿಬೋಧಕರುಗಳಿಗೆ ನೀಡುತ್ತಿರುವ ಸಂಭಾವನೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರಿ ಆದೇಶ ಸಂಖ್ಯೆ: ಕಾಇ 8 ಇಟಿಐ 1997 (ಭಾಗ) ದಿನಾಂಕ: 18–11–1997

2 ಪತ್ರ ಸಂಖ್ಯೆ: ಉತಇ/ತ/ಆಡಳಿತ–1/ವಿವ–59/2006–07, ದಿನಾಂಕ: 18–3–2006.

**ಪ್ರಸ್ತಾವನೆ :**

ರಾಜ್ಯದ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ವಿವಿಧ ತರಬೇತಿ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಸಿಬ್ಬಂದಿ ಕೊರತೆಯಿರುವಲ್ಲಿ ಎಲ್ಲಾ ವೃತ್ತಿ ಹಾಗೂ ಘಟಕಗಳಲ್ಲಿ ತರಬೇತಿಯನ್ನು ಪರಿಣಾಮಕಾರಿಯಾಗಿ ಕಾರ್ಯಗತಗೊಳಿಸಲು ಇಲಾಖೆಯ ಹೊರಗೆ ದೊರೆಯುವ ಅನುಭವೀ ಸಿಬ್ಬಂದಿಯನ್ನು ಪ್ರತಿ ಗಂಟೆಗೆ ರೂ. 50.00 ಗಳ ಸಂಭಾವನೆ ಆಧಾರದ

ಮೇಲೆ ಅನುಭವಶಾಲಿ ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳಲು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮಂಜೂರಾತಿ ನೀಡಲಾಗಿತ್ತು.

ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ರವರು ಮೇಲೆ (2)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಇಲಾಖೆಯಲ್ಲಿ ಕಿರಿಯ ತರಬೇತಿ ಅಧಿಕಾರಿಗಳ ಕೊರತೆ ಇರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಅತಿಥಿ ಬೋಧಕರ ಸೇವೆಯನ್ನು ಬಳಸಿಕೊಳ್ಳುತ್ತಿದ್ದು, ಇವರಿಗೆ ರೂ. 4565.00ಗಳ ಕ್ರೋಢೀಕೃತ ವೇತನವನ್ನು ನೀಡಬಹುದೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ರಾಜ್ಯದಲ್ಲಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಬೋಧಕರುಗಳಿಗೆ ಹಾಲಿ ನೀಡಲಾಗುತ್ತಿರುವ ಸಂಭಾವನೆಯನ್ನು ಪ್ರತಿ ಒಂದು ಗಂಟೆಗೆ ರೂ. 50.00 ರಿಂದ ರೂ. 100.00 ಕ್ಕೆ ಹೆಚ್ಚಿಸಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 04 ಇಟಿಐ 2006, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2007.**

ರಾಜ್ಯದಲ್ಲಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಅತಿಥಿ ಬೋಧಕರುಗಳಿಗೆ ಹಾಲಿ ನೀಡಲಾಗುತ್ತಿರುವ ಸಂಭಾವನೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಪ್ರತಿ ಒಂದು ಗಂಟೆಗೆ ರೂ. 50.00 (ಐವತ್ತು ರೂಪಾಯಿಗಳು) ರಿಂದ ರೂ. 100.00 (ಒಂದು ನೂರು ರೂಪಾಯಿಗಳು ಮಾತ್ರ) ಕ್ಕೆ ಹೆಚ್ಚಿಸಲು ಸರ್ಕಾರವು ಮಂಜೂರಾತಿ ನೀಡಿದೆ.

ಇದಕ್ಕೆ ತಗಲುವ ವೆಚ್ಚವನ್ನು 2230–03–101–0–01 ಕೈಗಾರಿಕಾ ತರಬೇತಿ ಸಂಸ್ಥೆಗಳು (ಯೋಜನೆ) ಲೆಕ್ಕಶೀರ್ಷಿಕೆಯಡಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1568

**ವಿ. ಶ್ರೀರಾಮರೆಡ್ಡಿ**
ಪೀಠಾಧಿಕಾರಿ
ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ENERGY SECRETARIAT**

**Sub:** Transfer of 1.5 MW Wind Power Capacity (Wind Mill Project) in favour of M/s Keerthi Industries Limited-reg.

**Read:**
1. Government order No. DE 26 NCE 1999 dated 13-5-1999.
2. Government order No. EN 102 NCE 2005 dated 21-4-2005.
3. Letter No. KRED/08/EDCL-SEL/2007/1899 dated: 24-8-2007 received from the Managing Director, Karnataka Renewable Energy Development Limited, Bangalore.

**Preamble:**

In the Government Order dated: 21-4-2005 read at (2) above sanction has been accorded for implementation of 25.5 MW capacity Wind Power Project (Wind Mill Project) at Belur region in Koppalahalli village, Hassan district by M/s Suzlon Energy Limited.

Now, the Managing Director, Karnataka Renewable Energy Development Limited, Bangalore in his letter dated: 24-8-2007 read at (3) above has recommended to the Government for transfer of 1.5 MW Wind Power capacity (Wind Mill Project) in favour of M/s. Keerthi Industries Limited from out of sanctioned 25.5 MW Wind Power Capacity of M/s Suzlon Energy Limited at Belur region in Kopalahalli village, Hassan Taluk, Hassan District.

The proposal has been examined at the Government level and hence the order:

**Government Order No. EN 290 NCE 2007, Bangalore, Dated 29th August 2007**

Government accords approval for transfer of 1.5 MW Wind Power capacity (Wind Mill Project) in favour of M/s Keerthi Industries Limited from out of sanctioned 25.5 MW Wind Power Capacity of M/s Suzlon Energy Limited at Belur region in Kopalahalli village, Hassan Taluk, Hassan District.

The terms and conditions of the Government Order read at (1) above shall **IPSO FACTO** applicable.

By order and in the name of Governor of Karnataka,

PR. 1550

**SURESH B. KRISHNAPPANAVAR**
Under Secretary to Government,
Energy Department.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯದಲ್ಲಿ ಸಾರ್ವಜನಿಕ ಪಡಿತರ ವ್ಯವಸ್ಥೆಯ ಮೂಲಕ ಅಯೋಡೈಸ್ಡ್ ಸತ್ವವುಳ್ಳ ಉಪ್ಪನ್ನು ವಿತರಿಸುವ ಕುರಿತು ಹೊರಡಿಸಿದ ಸರ್ಕಾರಿ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಆನಾಸ 5 ಆರ್‌ಪಿಆರ್ 04, ದಿನಾಂಕ: 3–2–2004.

**ಪ್ರಸ್ತಾವನೆ :**

ಕರ್ನಾಟಕ ರಾಜ್ಯದ ನ್ಯಾಯಬೆಲೆ ಅಂಗಡಿಯ ಮುಖಾಂತರ ಅಯೋಡೈಸ್ಡ್ ಸತ್ವವುಳ್ಳ ಉಪ್ಪನ್ನು ಒಂದು ಕಿ.ಲೋ. ಪ್ರಮಾಣದ ಪೊಟ್ಟಣಗಳನ್ನು ಸುರುಚಿ ಸಾಲ್ಟ್ ಎಂಬ ನಾಮಾಂಕದಲ್ಲಿ ತಮಿಳುನಾಡು ಸಗಟು ಮಾರಾಟ ಮಳಿಗೆಯಿಂದ ಖರೀದಿಸಲು ಉಲ್ಲೇಖದಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಅನುಮೋದನೆ ನೀಡಲಾಗಿತ್ತು. ತದನಂತರ ಆಂಧ್ರ ಪ್ರದೇಶ, ರಾಜಸ್ಥಾನ ಹಾಗೂ ಇತರೆ ರಾಜ್ಯಗಳಿಂದ ಸಹ ತಮ್ಮ ರಾಜ್ಯದ ಸಂಸ್ಥೆಗಳಿಂದ ಉಪ್ಪನ್ನು ಖರೀದಿಸಲು ಮನವಿಗಳು ಸ್ವೀಕೃತವಾಗಿದೆ.

ಈ ವಿಷಯವನ್ನು ಪುನರ್ ಪರಿಶೀಲಿಸಲಾಗಿದ್ದು ಸರ್ಕಾರದ ಅಧೀನದಲ್ಲಿರುವ ನಿಗಮದ ವ್ಯಾವಹಾರಿಕ ವ್ಯವಹಾರದ ಅಧಿಕಾರವನ್ನು ಸಂಬಂಧಪಟ್ಟ ನಿಗಮದ ವಿವೇಚನೆಗೆ ಬಿಡಬೇಕಾಗುತ್ತದೆ ಮತ್ತು ಪಾರದರ್ಶಕತೆ ಕಾಯಿದೆ ಜಾರಿಯಲ್ಲಿರುವುದರಿಂದ ಇಂತಹ ವಿಷಯಗಳಲ್ಲಿ ಸರ್ಕಾರವು ಯಾವುದೇ ಆದೇಶ ಹೊರಡಿಸಲು ಅವಕಾಶವಿರುವುದಿಲ್ಲ. ಮತ್ತು ಒಂದು ನಿರ್ದಿಷ್ಟ ಕಂಪನಿಯಿಂದ ನಿರ್ದಿಷ್ಟ ಸಾಮಗ್ರಿಗಳನ್ನು ಖರೀದಿಸಲು ಅಥವಾ ಒಂದು ನಿರ್ದಿಷ್ಟ ಸಂಸ್ಥೆಯು ಸಾಮಗ್ರಿಗಳನ್ನು ಸರಬರಾಜು ಮಾಡುವಂತೆ ಹೊರಡಿಸುವ ಸರ್ಕಾರಿ ಆದೇಶಗಳಿಗೆ ಸರ್ಕಾರದ ಅಧೀನದಲ್ಲಿರುವ ಸಗಟುಗಳು ಬದ್ಧವಾಗತಕ್ಕದ್ದಲ್ಲ. ಹಾಗೂ ತಮಿಳುನಾಡು ಉಪ್ಪು ನಿಗಮದವರು ತಮ್ಮ ಪತ್ರ ಸಂಖ್ಯೆ: 2250/ಎಂ.1/07 ದಿನಾಂಕ: 24–4–2007ರಲ್ಲಿ ಅವರು ರಾಜ್ಯಕ್ಕೆ ಸರಬರಾಜು ಮಾಡುತ್ತಿರುವ ಉಪ್ಪಿನ ಬೆಲೆಯನ್ನು ಪರಿಷ್ಕರಿಸುವಂತೆ ಕೋರಿರುವ ಮನವಿಯನ್ನು ಪರಿಗಣಿಸಲು ಆಹಾರ ನಿಗಮಕ್ಕೆ ಕಳುಹಿಸಬೇಕಾಗಿದೆ. ಆದ್ದರಿಂದ ಕೆಳಕಂಡ ಆದೇಶ:

**ಆದೇಶ ಸಂಖ್ಯೆ: ಆನಾಸ 28 ಆರ್‌ಪಿಆರ್ 07, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2007**

ಮೇಲ್ಕಂಡ ಅಂಶಗಳ ಹಿನ್ನಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಆನಾಸ 05 ಆರ್‌ಪಿಆರ್ 04, ದಿನಾಂಕ: 3–2–2004ನ್ನು ಈ ಮೂಲಕ ಹಿಂದಕ್ಕೆ ಪಡೆಯಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1569

**ಪಿ. ಶಿವರಾಮ ಭಟ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ
ವ್ಯವಹಾರಗಳ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಓಂಕಾರಮೂರ್ತಿ, ಕೆ.ಎ.ಎಸ್. (ಕಿರಿಯ ಶ್ರೇಣಿ) ಹಿಂದಿನ ತಹಶೀಲ್ದಾರ್, ತರೀಕೆರೆ ಹಾಗೂ ಶ್ರೀ ಈ.ಆರ್. ಹಾಲಪ್ಪ, ಗ್ರಾಮ ಪಂಚಾಯತಿ ಕಾರ್ಯದರ್ಶಿ, ಸುಣ್ಣದಹಳ್ಳಿ, ಚಿಕ್ಕಮಗಳೂರು ಇವರ ವಿರುದ್ಧ ಇಲಾಖಾ ವಿಚಾರಣೆ–ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1 ನೋಟೀಸ್ ಸಂಖ್ಯೆ: ಸಿಆಸುಇ 86 ಎಸ್‌ಇಎನ್ 2004, ದಿನಾಂಕ: 9–3–2007
2 ಶ್ರೀ ಓಂಕಾರಮೂರ್ತಿ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರ ಉತ್ತರ ದಿನಾಂಕ: 5–4–2007

**ಪ್ರಸ್ತಾವನೆ :**

ತರೀಕೆರೆ ತಾಲ್ಲೂಕು ಕಛೇರಿಯಲ್ಲಿ ಶ್ರೀ ಓಂಕಾರಮೂರ್ತಿ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅವರು ಈ ಹಿಂದೆ ತರೀಕೆರೆ ತಹಶೀಲ್ದಾರ್ ಆಗಿ ಹಾಗೂ ಶ್ರೀ ಈ.ಆರ್. ಹಾಲಪ್ಪ, ಗ್ರಾಮ ಪಂಚಾಯತಿ ಕಾರ್ಯದರ್ಶಿ, ಸುಣ್ಣದಹಳ್ಳಿ, ಚಿಕ್ಕಮಗಳೂರು ಜಿಲ್ಲೆ ಅವರು ಹಿಂದೆ ತರೀಕೆರೆ ತಹಶೀಲ್ದಾರರ ಕಛೇರಿಯಲ್ಲಿ ವಿಷಯ ನಿರ್ವಾಹಕರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಎಸ್.ಎನ್. ಮಹೇಂದ್ರ ಎಂಬುವವರು ಹಿಂದುಳಿದ ವರ್ಗದ ಕುರುಬ ಜಾತಿಗೆ ಸೇರಿದ್ದರೂ ಸಹ ಸದರಿಯವರು ಪರಿಶಿಷ್ಟ ಪಂಗಡಕ್ಕೆ ಸೇರಿದವರೆಂದು ಸುಳ್ಳು ಜಾತಿ ಪ್ರಮಾಣ ಪತ್ರ ನೀಡಿದ ಆರೋಪದ ಸಂಬಂಧ ಸದರಿ ಅಧಿಕಾರಿ/ನೌಕರರ ವಿರುದ್ಧ ಜಂಟಿ ಇಲಾಖಾ ವಿಚಾರಣೆ ಜರುಗಿಸಲು ಕಂದಾಯ ಇಲಾಖೆ ಪ್ರಸ್ತಾವನೆ ಕಳುಹಿಸಿದೆ. ಅಧಿಕಾರಿಯವರಿಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಮೇಲೆ (1)ರಲ್ಲಿ ಓದಲಾದ ದಿನಾಂಕ: 9–3–2007ರ ನೋಟೀಸಿನೊಂದಿಗೆ ದೋಷಾರೋಪಣೆಗಳನ್ನು ಜಾರಿ ಮಾಡುವುದರ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಶ್ರೀ ಓಂಕಾರಮೂರ್ತಿ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿಯು ನೋಟೀಸ್‌ಗೆ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದರೆ,

ಶ್ರೀ ಈ.ಆರ್. ಹಾಲಪ್ಪ, ಅವರು, ದಿನಾಂಕ: 9–3–2007ರಂದು ನೀಡಿರುವ ನೋಟೀಸ್‌ಗೆ ಉತ್ತರವನ್ನು ನೀಡಿರುವುದಿಲ್ಲ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ತಿಳಿಯುವ ದೃಷ್ಟಿಯಿಂದ ಈ ಪ್ರಕರಣದಲ್ಲಿ ವಿಚಾರಣಾಧಿಕಾರಿಯನ್ನು ಹಾಗೂ ಮಂಡನಾಧಿಕಾರಿಯನ್ನು ನೇಮಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 86 ಎಸ್‌ಇಎನ್ 2004, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಓಂಕಾರಮೂರ್ತಿ, ಕೆ.ಎ.ಎಸ್. (ಕಿರಿಯ ಶ್ರೇಣಿ) ಹಾಲಿ ವಿಶೇಷ ಭೂಸ್ವಾಧೀನ ಅಧಿಕಾರಿ, ತುಂಗಾ ಮೇಲ್ದಂಡೆ ಯೋಜನೆ, ಶಿವಮೊಗ್ಗ ಹುದ್ದೆಗೆ ವರ್ಗಾವಣೆ ಆದೇಶದಲ್ಲಿರುವವರು ಹಿಂದಿನ ತಹಶೀಲ್ದಾರ್, ತರೀಕೆರೆ ಹಾಗೂ ಶ್ರೀ ಈ.ಆರ್. ಹಾಲಪ್ಪ, ಗ್ರಾಮ ಪಂಚಾಯತಿ ಕಾರ್ಯದರ್ಶಿ, ಸುಣ್ಣದಹಳ್ಳಿ, ಚಿಕ್ಕಮಗಳೂರು ಜಿಲ್ಲೆ ಹಿಂದಿನ ವಿಷಯ ನಿರ್ವಾಹಕರರು, ತರೀಕೆರೆ ತಹಶೀಲ್ದಾರರ ಕಛೇರಿ ಇವರ ವಿರುದ್ಧ ಮಾಡಲಾದ ಆರೋಪ ಕುರಿತು ವಿಚಾರಣೆ ನಡೆಸಲು ಸರ್ಕಾರವು ಪ್ರಾದೇಶಿಕ ಆಯುಕ್ತರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ತಹಶೀಲ್ದಾರ್, ತರೀಕೆರೆ ಅವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1561

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2)

**ವಿಷಯ:** ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ನಿ) ಮತ್ತು ಶ್ರೀಮತಿ ರಮಾಕುಮಾರಿ, ಹಿಂದಿನ ಪುಸ್ತಕ ಆಯ್ಕೆ ಸಮಿತಿ ಮುಖ್ಯಸ್ಥರು, ಶ್ರೀ ಕೆ. ಕಾಮರಾಜು, ನಿವೃತ್ತ ದ್ವಿತೀಯ ದರ್ಜೆ ಗುಮಾಸ್ತರು ಅವರ ವಿರುದ್ಧ ಜಂಟಿ ಇಲಾಖಾ ವಿಚಾರಣೆ –ವಿಚಾರಾಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1 ನೋಟೀಸ್ ಸಂಖ್ಯೆ: ಸಿಆಸುಇ 397 ಎಸ್‌ಇಎನ್ 2006 ದಿನಾಂಕ: 12–6–2007
2 ನೋಟೀಸ್ ಸಂಖ್ಯೆ: ಸಿಆಸುಇ 397 ಎಸ್‌ಇಎನ್ 2006 ದಿನಾಂಕ: 12–6–2007
3 ನೋಟೀಸ್ ಸಂಖ್ಯೆ: ಸಿಆಸುಇ 397 ಎಸ್‌ಇಎನ್ 2006 ದಿನಾಂಕ: 12–6–2007
4 ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್. (ನಿ) ಅಧಿಕಾರಿ ಅವರ ದಿನಾಂಕ: 3–7–2007ರ ಉತ್ತರ.
5 ಶ್ರೀ ಕೆ. ಕಾಮರಾಜು, ನಿವೃತ್ತ ದ್ವಿತೀಯ ದರ್ಜೆ ಗುಮಾಸ್ತರು ಅವರ ದಿನಾಂಕ: 2–7–2007ರ ಉತ್ತರ.
6 ಶ್ರೀಮತಿ ರಮಾಕುಮಾರಿ, ಹಿಂದಿನ ಪುಸ್ತಕ ಆಯ್ಕೆ ಸಮಿತಿ, ಅಧ್ಯಕ್ಷರು ಹಾಗೂ ಪ್ರಥಮ ದರ್ಜೆ ಸಹಾಯಕರು, ಉಪ ವಿಭಾಗಾಧಿಕಾರಿಗಳ ಕಛೇರಿ, ತುಮಕೂರು ವಿಭಾಗ, ತುಮಕೂರು ಇವರ ದಿನಾಂಕ: 18–7–2007ರ ಉತ್ತರ.

**ಪ್ರಸ್ತಾವನೆ :**

ಶ್ರೀ ಕೆ.ಎಸ್. ನಿಂಗಪ್ಪ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಇವರು ತುಮಕೂರು ಜಿಲ್ಲಾ ಪಂಚಾಯತ್, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಹುದ್ದೆಯಲ್ಲಿ ಹಾಗೂ ತುಮಕೂರು ಜಿಲ್ಲಾ ಸಾಕ್ಷರತಾ ಸಮಿತಿ ಅಧ್ಯಕ್ಷರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ತುಮಕೂರು ಜಿಲ್ಲಾ ಸಾಕ್ಷರತಾ ಸಮಿತಿಯಲ್ಲಿ ಪುಸ್ತಕ ಖರೀದಿಯಲ್ಲಿ ನಡೆದಿರುವ ಆರೋಪದ ಸಂಬಂಧ ಶ್ರೀ ಕೆ.ಎಸ್. ನಿಂಗಪ್ಪ, ಕೆ.ಎ.ಎಸ್., ಅಧಿಕಾರಿ ಮತ್ತು ಸದರಿ ಆರೋಪಕ್ಕೆ ಸಂಬಂಧಪಟ್ಟಂತೆ ಶ್ರೀಮತಿ ಬಾ.ಹಾ. ರಮಾಕುಮಾರಿ, ಹಿಂದಿನ ಪುಸ್ತಕ ಆಯ್ಕೆ ಸಮಿತಿ ಅಧ್ಯಕ್ಷರು ಹಾಗೂ ಪ್ರಥಮ ದರ್ಜೆ ಸಹಾಯಕರು, ಉಪ ವಿಭಾಗಾಧಿಕಾರಿ ಕಛೇರಿ, ತುಮಕೂರು ವಿಭಾಗ, ತುಮಕೂರು, ಶ್ರೀ ಕೆ. ಕಾಮರಾಜು, ನಿವೃತ್ತ ದ್ವಿತೀಯ ದರ್ಜೆ ಗುಮಾಸ್ತರು, ಸಾಕ್ಷರತಾ ಸಮಿತಿ ತುಮಕೂರು ಇವರುಗಳಿಗೆ ಮೇಲೆ (1) ರಿಂದ (3)ರಲ್ಲಿ ಓದಲಾದ ದಿನಾಂಕ: 12–6–2007ರ ನೋಟೀಸನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿ ನಿಯಮ 11 ಮತ್ತು 11–ಎ ರನ್ವಯ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಸದರಿ ಅಧಿಕಾರಿಗಳು ಮೇಲೆ (4) ರಿಂದ (6) ರಲ್ಲಿ ಓದಲಾದ ದಿನಾಂಕಗಳಲ್ಲಿ ಉತ್ತರ ಸಲ್ಲಿಸಿ ತಮ್ಮ ಮೇಲೆ ಹೊರಿಸಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಅವರ ಮೇಲೆ ಹೊರಿಸಲಾದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು

ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಜಂಟಿ ಇಲಾಖಾ ವಿಚಾರಣೆಯನ್ನು ನಡೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 397 ಎಸ್ಇಎನ್ 2006, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (2)ರನ್ವಯ ನಿಯಮ 13ನ್ನು ಓದಿಕೊಂಡಂತೆ ಸರ್ಕಾರವು ಶ್ರೀ ಕೆ.ಎಸ್.ನಿಂಗಪ್ಪ, ನಿವೃತ್ತ ಕೆ.ಎ.ಎಸ್. ಅಧಿಕಾರಿ ಶ್ರೀಮತಿ ಬಾ.ಹ. ರಮಾಕುಮಾರಿ, ಹಿಂದಿನ ಪುಸ್ತಕ ಆಯ್ಕೆ ಸಮಿತಿ ಮುಖ್ಯಸ್ಥರು ಹಾಗೂ ಶ್ರೀ ಕೆ. ಕಾಮರಾಜು, ನಿವೃತ್ತ ದ್ವಿತೀಯ ದರ್ಜೆ ಗುಮಾಸ್ತರು, ಸಾಕ್ಷರತಾ ಸಮಿತಿ, ತುಮಕೂರು ಇವರುಗಳಿಗೆ ಅವರುಗಳ ವಿರುದ್ಧ ಮಾಡಲಾದ ಆರೋಪಗಳ ಕುರಿತು ಜಂಟಿ ಇಲಾಖಾ ವಿಚಾರಣೆ ನಡೆಸಲು ನಿರ್ದೇಶಕರು, ಸರ್ವಶಿಕ್ಷಣ ಅಭಿಯಾನ, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪ ನಿರ್ದೇಶಕರು, ತುಮಕೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಲಾಗಿದೆ. ವಿಚಾರಣೆಯನ್ನು 3 ತಿಂಗಳೊಳಗೆ ಮುಗಿಸಿ ವರದಿ ಸಲ್ಲಿಸುವಂತೆ ಆದೇಶಿಸಲಾಗಿದೆ.

ಈ ವಿಚಾರಣೆಗಾಗಿ ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಹಾಗೂ ಇತರ ಸೌಲಭ್ಯಗಳನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1562

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ ಆರ್. ಶ್ರೀನಿವಾಸ್, ಕೆ.ಎ.ಎಸ್. (ಕಿ.ಶ್ರೇ) ಅಧಿಕಾರಿ, ಹಿಂದಿನ ಆಯುಕ್ತರು, ಬೊಮ್ಮನಹಳ್ಳಿ ನಗರಸಭೆ ಇವರ ವಿರುದ್ಧ ಹೂಡಲು ಉದ್ದೇಶಿಸಲಾಗಿರುವ ಶಿಸ್ತು ಕ್ರಮವನ್ನು ಕೈಬಿಟ್ಟು ಈ ಸಂಬಂಧ ಅಮಾನತ್ತಿನಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸುವ ಬಗ್ಗೆ.

**ಓದಲಾಗಿದೆ:**
1 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 52 ಎಸ್ಇಎನ್ 2002, ದಿನಾಂಕ: 24-4-2002.
2 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಎಸ್ಇಎನ್ 2002, ದಿನಾಂಕ: 18-7-2002.
3 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 69 ಎಸ್ಇಎನ್ 2002, ದಿನಾಂಕ: 19-5-2003.
4 ನಗರಾಭಿವೃದ್ಧಿ ಇಲಾಖೆ ಹಿಂಬರಹ ಸಂಖ್ಯೆ: ನಅಇ 98 ಡಿಎಂಕೆ 2001, ದಿನಾಂಕ: 20-6-2007

**ಪ್ರಸ್ತಾವನೆ :**

ಶ್ರೀ ಆರ್. ಶ್ರೀನಿವಾಸ್, ಕೆ.ಎ.ಎಸ್. ಅಧಿಕಾರಿ, ಇವರು ಬೊಮ್ಮನಹಳ್ಳಿ, ನಗರಸಭೆಯ ಆಯುಕ್ತರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಅವರು ಬೊಮ್ಮನಹಳ್ಳಿ ನಗರಸಭೆಯ ವಿವಿಧ ವಾರ್ಡ್‌ಗಳಲ್ಲಿ ರೂ. 1.64 ಕೋಟಿ ಅಂದಾಜು ವೆಚ್ಚದ 54 ಒಳಚರಂಡಿ ಕಾಮಗಾರಿಗಳನ್ನು ಸರ್ಕಾರದ ಅನುಮೋದನೆ ಪಡೆಯದೆ ನಿಯಮಗಳನ್ನು ಉಲ್ಲಂಘಿಸಿ ಕಾಮಗಾರಿಗಳನ್ನು ಕೈಗೊಂಡು ಹಣ ದುರುಪಯೋಗ ಪಡಿಸಿರುವ ಆರೋಪದ ಸಂಬಂಧ ಮೇಲೆ (1)ರಲ್ಲಿ ಓದಲಾದ ದಿನಾಂಕ: 24-4-2002ರ ಸರ್ಕಾರಿ ಆದೇಶದಲ್ಲಿ ಅವರ ವಿರುದ್ಧ ಶಿಸ್ತಿನ ಕ್ರಮವನ್ನು ಬಾಕಿ ಇರಿಸಿ ಸೇವೆಯಿಂದ ಅಮಾನತ್ತುಗೊಳಿಸಲಾಯಿತು. ತದನಂತರ ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ: 19-5-2003ರ ಸರ್ಕಾರಿ ಆದೇಶದಲ್ಲಿ ಬೆಂಗಳೂರು ನಗರದ ಸುತ್ತಮುತ್ತಲಿನ ಪುರಸಭೆ ನಗರಸಭೆಗಳಲ್ಲಿ ನಡೆದ ಅವ್ಯವಹಾರಗಳ ಕುರಿತಂತೆ, ಇವರೂ ಸೇರಿದಂತೆ ಇತರರ ವಿರುದ್ಧ ಲೋಕಾಯುಕ್ತ ತನಿಖೆಯನ್ನು ಕಾಯ್ದಿರಿಸಿ ಇವರ ಅಮಾನತ್ತನ್ನು ತೆರವುಗೊಳಿಸಿ ಮತ್ತೆ ಸೇವೆಗೆ ತೆಗೆದುಕೊಳ್ಳಲಾಯಿತು.

ಈ ಮಧ್ಯೆ ನಗರಾಭಿವೃದ್ಧಿ ಇಲಾಖೆಯು ಶ್ರೀ ಆರ್. ಶ್ರೀನಿವಾಸ್, ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧ ಶಿಸ್ತಿನ ಕ್ರಮವನ್ನು ತೆಗೆದುಕೊಳ್ಳಲು ಪ್ರಸ್ತಾಪಿಸಿದ್ದನ್ನು ಪರಿಶೀಲಿಸಲಾಗಿ, ಬೆಂಗಳೂರು ಸುತ್ತಮುತ್ತಲಿನ ನಗರಸಭೆಗಳಲ್ಲಿ ನಡೆದ ಅವ್ಯವಹಾರಕ್ಕೆ ಸಂಬಂಧಿಸಿದಂತೆ, ತನಿಖೆ ನಡೆಯುತ್ತಿರುವ ಪ್ರಕರಣಕ್ಕೂ ಶ್ರೀ ಆರ್. ಶ್ರೀನಿವಾಸ್, ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧದ ಬೊಮ್ಮನಹಳ್ಳಿಯ ನಗರಸಭೆಯ ಒಳಚರಂಡಿ ಕಾಮಗಾರಿಯ ಪ್ರಕರಣಕ್ಕೂ ಯಾವುದೇ ಸಂಬಂಧ ಇಲ್ಲವೆಂದು ಹಾಗೂ ಬೊಮ್ಮನಹಳ್ಳಿ ನಗರಸಭೆಯಲ್ಲಿ ಒಳಚರಂಡಿ ಕಾಮಗಾರಿಗಳನ್ನು ದಿನಾಂಕ: 10-7-2000ರ ಪೂರ್ವದಲ್ಲಿ ತೆಗೆದುಕೊಂಡಿದ್ದು, ಆ ಅವಧಿಯಲ್ಲಿ ಶ್ರೀ ಆರ್. ಶ್ರೀನಿವಾಸ್ ಅವರು ಅಲ್ಲಿ ಕಾರ್ಯನಿರ್ವಹಿಸದೇ ಇರುವುದನ್ನು ಗಮನಕ್ಕೆ

ತೆಗೆದುಕೊಂಡು ನಗರಾಭಿವೃದ್ಧಿ ಇಲಾಖೆಯು ಅವರ ವಿರುದ್ಧ ಯಾವುದೇ ಶಿಸ್ತಿನ ಕ್ರಮ ಅಗತ್ಯ ಇಲ್ಲವೆಂದು ಹಾಗೂ ಈ ಪ್ರಕರಣ ಕೈಬಿಡಲು ಶೀಫಾರಸ್ಸು ಮಾಡಿದೆ.

ಶ್ರೀ ಆರ್. ಶ್ರೀನಿವಾಸ್, ಕೆ.ಎ.ಎಸ್. ಅಧಿಕಾರಿ ಅವರನ್ನು ಈ ಪ್ರಕರಣ ಸಂಬಂಧ ದಿನಾಂಕ: 24–4–2002ರ ಸರ್ಕಾರಿ ಆದೇಶದಲ್ಲಿ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶ ಹೊರಡಿಸಲಾಗಿತ್ತು. ಬೆಂಗಳೂರು ಸುತ್ತಮುತ್ತಲಿನ ನಗರಸಭೆಗಳಲ್ಲಿ ನಡೆದ ಅವ್ಯವಹಾರ ಪ್ರಕರಣದಲ್ಲಿ ಭಾಗಿಯಾಗಿದ್ದ ಎಲ್ಲಾ ಅಧಿಕಾರಿಗಳನ್ನು ದಿನಾಂಕ: 18–7–2002ರ ಆದೇಶದಲ್ಲಿ ಅಮಾನತ್ತುಗೊಳಿಸಲಾಗಿತ್ತು. ಆದರೆ, ಶ್ರೀ ಆರ್. ಶ್ರೀನಿವಾಸ್ ಅವರು ಆಗಲೇ ಈ ಪ್ರಕರಣದಲ್ಲಿ ಅಮಾನತ್ತಿನಲ್ಲಿ ಇದ್ದುದರಿಂದ ಪುನಃ ಸಿ.ಎಂ.ಸಿ. ಹಗರಣದ ಸಂಬಂಧದಲ್ಲಿ ಮತ್ತೊಮ್ಮೆ ಅಮಾನತ್ತಿನಲ್ಲಿ ಇರಿಸುವ ಅಗತ್ಯ ಇಲ್ಲವೆಂದು ಅಮಾನತ್ತಿನ ಆದೇಶವನ್ನು ಇತರೆ ಅಧಿಕಾರಿಗಳ ಜೊತೆಗೆ ಸೇರ್ಪಡಿಸಿರಲಿಲ್ಲ. ಕೊನೆಯದಾಗಿ ಎಲ್ಲಾ ಅಧಿಕಾರಿಗಳ ಅಮಾನತ್ತನ್ನು ವಾಪಸ್ಸು ಪಡೆಯುವ ಸಂದರ್ಭದಲ್ಲಿ ಶ್ರೀ ಆರ್. ಶ್ರೀನಿವಾಸ್ ಅವರ ಅಮಾನತ್ತಿನ ಆದೇಶವನ್ನು ಸಹ ದಿನಾಂಕ: 19–5–2003ರ ಸರ್ಕಾರಿ ಆದೇಶದಲ್ಲಿ ರದ್ದುಪಡಿಸಲಾಗಿತ್ತು.

ಮೇಲ್ಕಂಡ ಅಂಶಗಳ ಹಾಗೂ ಬೊಮ್ಮನಹಳ್ಳಿ ನಗರಸಭೆಯ ವಿವಿಧ ವಾರ್ಡ್‌ಗಳಲ್ಲಿ ಒಳಚರಂಡಿ ಕಾಮಗಾರಿಗಳು ನಡೆಯುವಾಗ ಸದರಿ ಅಧಿಕಾರಿಯವರು ಅಲ್ಲಿ ಕಾರ್ಯನಿರ್ವಹಿಸದೇ ಇರುವುದು ಕಂಡುಬಂದಿರುವ ಹಿನ್ನೆಲೆಯಲ್ಲಿ ಹಾಗೂ ನಗರಾಭಿವೃದ್ಧಿ ಇಲಾಖೆಯ ಶಿಫಾರಸ್ಸಿನ ಮೇರೆಗೆ ಶ್ರೀ ಆರ್. ಶ್ರೀನಿವಾಸ್ ಅವರ ವಿರುದ್ಧ ಬೊಮ್ಮನಹಳ್ಳಿ ನಗರಸಭೆಯ ಒಳಚರಂಡಿ ಕಾಮಗಾರಿಗಳ ಸಂಬಂಧ ಹೂಡಲು ಉದ್ದೇಶಿಸಿದ್ದ ಶಿಸ್ತು ಕ್ರಮವನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯ ಮಾಡಲು ಹಾಗೂ ಈ ಸಂಬಂಧ ಅವರು ಅಮಾನತ್ತಿನಲ್ಲಿ ಕಳೆದ ದಿನಾಂಕ: 24–4–2002 ರಿಂದ 17–7–2002ರವರೆಗಿನ ಅವಧಿಯನ್ನು ಸಕ್ರಮಗೊಳಿಸಲು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 52 ಎಸ್‌ಇಎನ್ 2002, ಬೆಂಗಳೂರು, ದಿನಾಂಕ: 28ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ, ಸರ್ಕಾರವು ಶ್ರೀ ಆರ್. ಶ್ರೀನಿವಾಸ್, ಕೆ.ಎ.ಎಸ್. (ಕಿ.ಶ್ರೇ) ಹಿಂದಿನ ಆಯುಕ್ತರು, ಬೊಮ್ಮನಹಳ್ಳಿ ನಗರಸಭೆ ಅವರ ವಿರುದ್ಧ ಈ ನಗರಸಭೆಯ ಒಳಚರಂಡಿ ಕಾಮಗಾರಿಗಳ ಸಂಬಂಧ ಶಿಸ್ತು ಕ್ರಮವನ್ನು ಕೈಗೊಳ್ಳಲು ಉದ್ದೇಶಿಸಿರುವುದನ್ನು ಕೈಬಿಟ್ಟು ಪ್ರಕರಣವನ್ನು ಮುಕ್ತಾಯಗೊಳಿಸಿದೆ. ಹಾಗೂ ಈ ಸಂಬಂಧ ಅವರು ಅಮಾನತ್ತಿನಲ್ಲಿ ಕಳೆದ ದಿನಾಂಕ: 24–4–2002 ರಿಂದ 17–7–2002ರವರೆಗಿನ ಅವಧಿಯನ್ನು ಕರ್ತವ್ಯದ ಮೇಲಿನ ಅವಧಿಯೆಂದು ಪರಿಗಣಿಸಲಾಗಿದೆ.

ದಿನಾಂಕ: 18–7–2002 ರಿಂದ ದಿನಾಂಕ: 19–5–2002ರವರೆಗಿನ ಅಮಾನತ್ತಿನ ಅವಧಿಯ ಬಗ್ಗೆ ಸಿ.ಎಂ.ಸಿ. ಅವ್ಯವಹಾರದ ಪ್ರಕರಣದಲ್ಲಿ ತೆಗೆದುಕೊಳ್ಳುವ ನಿರ್ಣಯದ ಸಂದರ್ಭದಲ್ಲಿ ತೀರ್ಮಾನಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1563

**ಎಚ್.ಆರ್. ನಾಗೇಂದ್ರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಆಸುಇ (ಸೇವೆಗಳು–2)

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಡಾ॥ ಟಿ. ಅನ್ನಪೂರ್ಣ, ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಬೆಂಗಳೂರು (ಪ್ರಸ್ತುತ ಅಮಾನತ್ತಿನಲ್ಲಿರುವವರು) ಇವರನ್ನು ಸೇವೆಯಲ್ಲಿ ಪುನರ್ ಸ್ಥಾಪಿಸುವ ಕುರಿತು–ಆದೇಶ.

**ಓದಲಾಗಿದೆ:**

1 ಶ್ರೀ ರಾಜಶೇಖರ ರೆಡ್ಡಿ, ನಂ. 2082, 11ನೇ ಕ್ರಾಸ್, 2ನೇ ಮೇನ್, ವಸಂತ ನಗರ, ಬೆಂಗಳೂರು, ಇವರು ದಿ: 10–5–2007ರಂದು ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಹಾಗೂ ಅಧ್ಯಕ್ಷರು, ಬಾಲಭವನ ಸೊಸೈಟಿ ಬೆಂಗಳೂರು ಇವರಿಗೆ ನೀಡಿರುವ ದೂರು.

2 ಸರ್ಕಾರದ ಆದೇಶ ಸಂಖ್ಯೆ: ಮಮಇ 280 ಎಸ್‌ಜೆಡಿ 2007 ದಿ: 11–7–2007.

3 ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಇವರ ಪತ್ರ ಸಂಖ್ಯೆ: ಡಿಡಬ್ಲ್ಯೂಸಿ/ನಿಸಿಪ/10/07–08, ದಿ: 17–8–2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿ: 10–5–2007ರ ಪತ್ರದಲ್ಲಿ ಶ್ರೀ ರಾಜಶೇಖರ ರೆಡ್ಡಿ, ಬೆಂಗಳೂರು, ಇವರು ಸರ್ಕಾರದ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಹಾಗೂ ಅಧ್ಯಕ್ಷರು, ಬಾಲಭವನ ಸೊಸೈಟಿ, ಬೆಂಗಳೂರು, ಇವರಿಗೆ ಡಾ॥ ಟಿ. ಅನ್ನಪೂರ್ಣ, ಆಡಳಿತಾಧಿಕಾರಿ, ಜವಹರ ಬಾಲಭವನ, ಬೆಂಗಳೂರು, ಇವರ ಕಾರ್ಯವೈಖರಿಯ ವಿರುದ್ಧ ದೂರು ನೀಡಿ ಸದರಿಯವರು ಸಾರ್ವಜನಿಕರೊಂದಿಗೆ ಸರಿಯಾಗಿ ವರ್ತಿಸುತ್ತಿಲ್ಲವೆಂದು ಹಾಗೂ ಬಾಲಭವನದ ವಾಹನವನ್ನು ದುರುಪಯೋಗ ಪಡಿಸುತ್ತಿರುವುದಾಗಿ ತಿಳಿಸಿರುತ್ತಾರೆ. ಈ ಬಗ್ಗೆ ಡಾ॥ ಟಿ. ಅನ್ನಪೂರ್ಣರವರಿಗೆ

ದಿ: 01–06–2007ರಂದು ನೋಟೀಸ್ ನೀಡಲಾಗಿದೆ. ಅದಕ್ಕೆ ಪ್ರತಿಯಾಗಿ ಡಾ॥ ಟಿ. ಅನ್ನಪೂರ್ಣರವರು ದಿ: 03–06–2007ರಂದು ನೀಡಿರುವ ತಮ್ಮ ವಿವರಣೆಯಲ್ಲಿ ದಿ: 10–5–2007ರಂದು ಕಾರ್ಯದರ್ಶಿಗಳು, ಬಾಲಭವನ ಇವರೊಡನೆ ಸ್ಥಳ ಭೇಟಿ ಮಾಡಲು ಹೋಗಿದ್ದುದಾಗಿ ಸುಳ್ಳು ವರದಿ ಮಾಡಿರುವುದು ಹಾಗೂ ವಾಹನವನ್ನು ಅವರ ಸ್ವಂತ ಕೆಲಸ ಕಾರ್ಯಗಳಿಗೆ ಉಪಯೋಗಿಸಿರುವುದು ಕಂಡು ಬಂದಿರುವ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿ: 11–07–2007ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳು 1957ರ ನಿಯಮ 19(1)(ಎ)ರನ್ವಯ ಅಮಾನತ್ತಿನಲ್ಲಿಡಲಾಗಿತ್ತು.

ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ರವರು ಮೇಲೆ (3)ರಲ್ಲಿ ಓದಲಾದ ದಿ: 17–08–2007ರ ಪತ್ರದ ಮುಖಾಂತರ ಪ್ರಸ್ತಾವನೆ ಸಲ್ಲಿಸಿ, ಆಡಳಿತಾತ್ಮಕ ದೃಷ್ಟಿಯಿಂದ ಡಾ॥ ಟಿ. ಅನ್ನಪೂರ್ಣ, ಆಡಳಿತಾಧಿಕಾರಿ, ಬಾಲಭವನ ಸೊಸೈಟಿ (ಹಾಲಿ ಅಮಾನತ್ತಿನಲ್ಲಿರುವವರು) ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇಟ್ಟು ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸಿ ಅಂಗವಿಕಲರ ಕಲ್ಯಾಣಾಧಿಕಾರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಇಲ್ಲಿಯ ಖಾಲಿ ಹುದ್ದೆಗೆ ನೇಮಿಸಿ ಆದೇಶ ಹೊರಡಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ನಿರ್ದೇಶಕರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಡಾ॥ ಟಿ. ಅನ್ನಪೂರ್ಣ, ಆಡಳಿತಾಧಿಕಾರಿ (ಅಮಾನತ್ತಿನಲ್ಲಿರುವವರು), ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ ಸದರಿಯವರನ್ನು ಅಮಾನತ್ತಿನಿಂದ ತೆರವುಗೊಳಿಸಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ. ಮಮಇ 280 ಎಸ್‌ಜೆಡಿ 2007, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಡಾ॥ ಟಿ. ಅನ್ನಪೂರ್ಣ ಆಡಳಿತಾಧಿಕಾರಿ, ಬಾಲಭವನ ಸೊಸೈಟಿ, ಬೆಂಗಳೂರು, ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, ಇವರ ಅಮಾನತ್ತನ್ನು ಈ ತಕ್ಷಣದಿಂದಲೇ ಜಾರಿಗೆ ಬರುವಂತೆ ತೆರವುಗೊಳಿಸಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಂಗವಿಕಲರ ಕಲ್ಯಾಣಾಧಿಕಾರಿ ಹುದ್ದೆಗೆ ನಿಯೋಜಿಸಿ ಸ್ಥಳ ನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1597

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ವಿಷಯ:** ಶ್ರೀ ಕೆ. ಗೋಪಾಲಕೃಷ್ಣ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಾಮರಾಜನಗರ, ಇವರನ್ನು ಅಮಾನತ್ತಿನಲ್ಲಿ ಇರಿಸುವ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಚಾಮರಾಜನಗರ, ಇವರ ಪತ್ರ ಸಂಖ್ಯೆ: ಜಿ.ಪಂ.ಚಾ/ಆಡಳಿತ (4)/2007–08, ದಿನಾಂಕ: 13–7–2007

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ: 13–7–2007ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್, ಚಾಮರಾಜನಗರ ಜಿಲ್ಲೆ ಇವರು ಪ್ರಸ್ತಾವನೆ ಸಲ್ಲಿಸಿ ಶ್ರೀ ಕೆ. ಗೋಪಾಲಕೃಷ್ಣ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಾಮರಾಜನಗರ ಇವರು ಜಿಲ್ಲೆಯಲ್ಲಿ ಸಮರ್ಪಕವಾಗಿ ಕಾರ್ಯನಿರ್ವಹಿಸದೆ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಪೂರ್ಣ ಮಾಹಿತಿಯನ್ನು ಅನೇಕ ಬಾರಿ ಜಿಲ್ಲಾ ಪಂಚಾಯತ್ ಚಾಮರಾಜನಗರರವರು ಕೇಳಿಕೊಂಡಾಗ್ಯೂ ಒದಗಿಸದೇ ಇರುವುದನ್ನು ಜಿಲ್ಲಾ ಪಂಚಾಯತ್ ಸದಸ್ಯರು ಆಕ್ಷೇಪಿಸಿರುತ್ತಾರೆಂದು ಹಾಗೂ 2006–07ನೇ ಸಾಲಿನ ಕ್ರಿಯಾ ಯೋಜನೆಯ ಅನುಮೋದನೆಯನ್ನು ತಡೆಹಿಡಿಯಲಾಗಿದ್ದು, ಈ ಬಗ್ಗೆ ಜಿಲ್ಲಾ ಪಂಚಾಯತ್ ಚಾಮರಾಜನಗರ ಜಿಲ್ಲೆ ರವರು ಯಾವುದೇ ಮಾಹಿತಿ ಕೇಳಿದರೂ ಸದರಿಯವರು ಉತ್ತರಿಸದೇ ಬೇಜವಾಬ್ದಾರಿಯ ಹಾರಿಕೆ ಉತ್ತರವನ್ನು ನೀಡಿರುತ್ತೀರೆಂದು ಸರ್ಕಾರಕ್ಕೆ ವರದಿ ಮಾಡುತ್ತಾ ಚಾಮರಾಜನಗರ ಜಿಲ್ಲಾ ಪಂಚಾಯತ್ ಸ್ಥಾಯಿ ಸಮಿತಿ ಸಭಾಂಗಣದಲ್ಲಿ ಜಿಲ್ಲಾ ಪಂಚಾಯತ್ ಅಧ್ಯಕ್ಷರಾದ ಶ್ರೀ ಎಸ್. ನಟರಾಜ್ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 10–7–2006ರಂದು ನಡೆದ ಜಿಲ್ಲಾ ಪಂಚಾಯತ್ ಸಾಮಾನ್ಯ ಸಭೆ ಹಾಗೂ ದಿ: 22–8–2006ರಂದು ನಡೆದ ಹಣಕಾಸು ಲೆಕ್ಕ ಪರಿಶೋಧನೆ ಮತ್ತು ಯೋಜನಾ ಸ್ಥಾಯಿ ಸಮಿತಿ ಸಭೆಗಳಲ್ಲಿ ಕೂಡ ಬೇಜಾಬ್ದಾರಿಯಾಗಿ ಹಾರಿಕೆ ಉತ್ತರಗಳನ್ನು ನೀಡಿರುತ್ತೀರೆಂದು ತಿಳಿಸುತ್ತಾ, ಸದರಿಯವರ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸಾಬೀತಾಗಿರುವುದರಿಂದ ಸದರಿಯವರ ವಿರುದ್ಧ ಶಿಸ್ತು ಕ್ರಮ ಕೈಗೊಳ್ಳುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯತ್ ಚಾಮರಾಜನಗರ ರವರ ವರದಿಯನ್ನು ಸರ್ಕಾರವು ಪರಿಶೀಲಿಸಿ, ಶ್ರೀ ಕೆ. ಗೋಪಾಲಕೃಷ್ಣ, ಉಪ ನಿರ್ದೇಶಕರು, ಚಾಮರಾಜನಗರ ಇವರು ಕರ್ನಾಟಕ ನಾಗರೀಕ ಸೇವೆ (ನಡತೆ) ನಿಯಮಾವಳಿಗಳು 1966ರ ನಿಯಮ 3ರ ಅನ್ವಯ ದುರ್ನಡತೆ ಎಸಗಿರುವುದು ಮೇಲ್ನೋಟಕ್ಕೆ ಕಂಡುಬಂದಿರುವುದರಿಂದ

ಸದರಿಯವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವುದನ್ನು ಬಾಕಿ ಇಟ್ಟು ಸದರಿ ಅಧಿಕಾರಿಯನ್ನು ಕೂಡಲೇ ಸೇವೆಯಿಂದ ಅಮಾನತ್ತಿನಲ್ಲಿಡಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 350 ಎಸ್‌ಜೆಡಿ 2007, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಕೆ. ಗೋಪಾಲಕೃಷ್ಣ, ಉಪ ನಿರ್ದೇಶಕರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಚಾಮರಾಜನಗರ ಜಿಲ್ಲೆ, ಇವರನ್ನು ಅವರ ಮೇಲಿನ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಾವಳಿಗಳು 1957ರ ನಿಯಮ 10(1)(ಎ) ಮೇರೆಗೆ ತಕ್ಷಣದಿಂದಲೇ ಜಾರಿಗೆ ಬರುವಂತೆ ಸೇವೆಯಿಂದ ಅಮಾನತ್ತುಗೊಳಿಸಿ ಆದೇಶಿಸಿದೆ.

ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1957ರ ನಿಯಮ 98(1)ರನ್ವಯ ಜೀವನಾಂಶ ಭತ್ಯೆ ಪಡೆಯಲು ಅರ್ಹರಾಗಿರುತ್ತಾರೆ. ಅಲ್ಲದೆ ಅಮಾನತ್ತಿನ ಅವಧಿಯಲ್ಲಿ ಸದರಿ ಅಧಿಕಾರಿಯು ಸಕ್ಷಮ ಪ್ರಾಧಿಕಾರದ ಲಿಖಿತ ಅನುಮೋದನೆ ಇಲ್ಲದೆ ಕೇಂದ್ರ ಸ್ಥಾನವನ್ನು ಬಿಡತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1596

**ಆರ್.ಎಂ. ಚಂದ್ರಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ–2,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ:** ಶ್ರೀ ಶಾಂತಕುಮಾರ್ ಪಾಟೀಲ್, ಹಿಂದಿನ ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೀದರ್ ಇವರ ಪ್ರತಿನಿಯೋಜನೆ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ:**
1 ಅಧಿಸೂಚನೆ ಸಂಖ್ಯೆ: ಸಂಕಇ 119 ಕಸನಿ 2002 ದಿನಾಂಕ: 25–2–2003.
2 ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ ಸಂಖ್ಯೆ: ಕಸನಿ: 68:ಸಿಬ್ಬಂದಿ: 2000–01, ದಿನಾಂಕ: 14–9–2006.
3 ಶ್ರೀ ಶಾಂತಕುಮಾರ್ ಪಾಟೀಲ್ ಅವರ ಮನವಿ ದಿನಾಂಕ: 13–9–2006.

**ಪ್ರಸ್ತಾವನೆ :**

ಪದವಿ ಪೂರ್ವ ಶಿಕ್ಷಣ ಇಲಾಖೆಯಿಂದ ಪ್ರತಿನಿಯೋಜನೆ ಮೇರೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೀದರ್ ಇಲ್ಲಿ ಸಹಾಯಕ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಶಾಂತಕುಮಾರ್ ಪಾಟೀಲ್ ಅವರ ಸೇವೆಯನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ: 27–2–2003ರ ಅಧಿಸೂಚನೆಯಲ್ಲಿ 10–11–2002ರಿಂದ 30–4–2004ರವರೆಗೆ ಮುಂದುವರಿಸಲಾಯಿತು. ಆ ನಂತರದ ಮುಂದುವರಿಕೆಯು ಸರ್ಕಾರದ ಪರಿಶೀಲನೆಯಲ್ಲಿದ್ದಾಗ ಶಾಂತಕುಮಾರ್ ಪಾಟೀಲ್ ಅವರು ಪ್ರಾಂಶುಪಾಲರಾಗಿ ಪದೋನ್ನತಿ ಹೊಂದಿ ಸರ್ಕಾರಿ ಪದವಿ ಪೂರ್ವ ಕಾಲೇಜು, ಮುದಗಲ್, ಲಿಂಗಸಗೂರು ತಾಲ್ಲೂಕು, ರಾಯಚೂರು ಇಲ್ಲಿಗೆ ನೇಮಕಗೊಂಡು ದಿನಾಂಕ: 27–3–2006ರಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಬಿಡುಗಡೆ ಹೊಂದಿದರು.

ಶಾಂತಕುಮಾರ್ ಪಾಟೀಲ್ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 13–6–2006ರ ಮನವಿ ಸಲ್ಲಿಸಿ ಮೇ 2004ರಿಂದ ಮಾರ್ಚ್ 22 2006ರವರೆಗೆ ಅವರ ಸೇವೆಯನ್ನು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಮುಂದುವರಿಸಿ ಆದೇಶ ಹೊರಡಿಸುವಂತೆ ಕೋರಿದ್ದಾರೆ. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರು ಮೇಲೆ (3)ರಲ್ಲಿ ಓದಲಾದ ದಿನಾಂಕ: 14–9–2006ರ ಪತ್ರದಲ್ಲಿ ಶಾಂತಕುಮಾರ್ ಪಾಟೀಲ್ ಅವರ ಪ್ರತಿನಿಯೋಜನೆ ಅವಧಿಯನ್ನು 1–5–2004ರಿಂದ 27–3–2006ರವರೆಗೆ ಮುಂದುವರೆಸಲು ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 8 ಕಸನಿ 2005, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2007**

ಶಾಂತಕುಮಾರ್ ಪಾಟೀಲ್, ಹಿಂದಿನ ಸಹಾಯಕ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೀದರ್, ಅವರ ಪ್ರತಿನಿಯೋಜನೆ ಅವಧಿಯನ್ನು 1–5–2004 ರಿಂದ 27–3–2006ರವರೆಗೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಲ್ಲಿ ಮುಂದುವರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1590

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು

ಪ್ರವಾಸೋದ್ಯಮ ಇಲಾಖೆ (ಆಡಳಿತ ಕನ್ನಡ)

**COMMERCE & INDUSTRIES SECRETARIAT**

**CORRIGANDUM**

**No. CI 2 SPI 2007, Bangalore, Dated: 30th August 2007**

In the Government order No. CI 2 SPI 07 Bangalore dated 28-4-2007 in the place of the word "to set up captive power plant of 24 MW" be read as "to set up captive power plant of 50 MW".

By order and in the name of the Governor of Karnataka,

PR.1603

**K.R. CHANDRAMMA**

Desk Officer (Technical Cell)

Commerce & Industries Department.

**ವಸತಿ ಸಚಿವಾಲಯ**

**ತಿದ್ದುಪಡಿ**

**ಸಂ.ವಇ:177:ಹೆಚ್‌ಎಎಸ್:2007, ಬೆಂಗಳೂರು ದಿನಾಂಕ: 23ನೇ ಜುಲೈ 2007**

ದಿನಾಂಕ: 05–7–2007 ರಂದು ಹೊರಡಿಸಿದ ಸರ್ಕಾರಿ ಆದೇಶದಲ್ಲಿ "ಹುಬ್ಬಳ್ಳಿ ಶಹರ ಮತಕ್ಷೇತ್ರದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ" ಎಂಬುದರ ಬದಲಾಗಿ "ಧಾರವಾಡ ಜಿಲ್ಲೆಯ ಹುಬ್ಬಳ್ಳಿ ನಗರ ಮತಕ್ಷೇತ್ರದ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ". ಎಂದು ಓದಿ ತಿದ್ದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1579

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

**ತಿದ್ದುಪಡಿ**

**ಸಂ.ವಇ:3:ಹೆಚ್‌ಎಎಸ್:2007, ಬೆಂಗಳೂರು ದಿನಾಂಕ: 23ನೇ ಜುಲೈ 2007**

ದಿನಾಂಕ: 12–7–2007 ರಂದು ಹೊರಡಿಸಿದ ಸರ್ಕಾರಿ ಆದೇಶದಲ್ಲಿ ಹುಬ್ಬಳ್ಳಿ ಜಿಲ್ಲೆಯ "ಹುಬ್ಬಳ್ಳಿ ಗ್ರಾಮೀಣ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ" ಎಂಬುದರ ಬದಲಾಗಿ "ಧಾರವಾಡ ಜಿಲ್ಲೆಯ ಹುಬ್ಬಳ್ಳಿ ಗ್ರಾಮೀಣ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ". ಎಂದು ಓದಿ ತಿದ್ದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1580

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ :** ವಿಜಾಪೂರ ಜಿಲ್ಲೆ, ವಿಜಾಪೂರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ. ವಇ/42/ಹೆಚ್‌ಎಎಂ/1998, ದಿನಾಂಕ: 10–4–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ವಿಜಾಪೂರ ಜಿಲ್ಲೆ, ವಿಜಾಪೂರ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ 156 ಹೆಚ್‌ಎಎಸ್ 2006, ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2007**

ಮೇಲ್ಕಂಡ ಸಂದರ್ಭದಲ್ಲಿ ವಿಜಾಪೂರ ಜಿಲ್ಲೆಯ ವಿಜಾಪೂರ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಷಣ್ಮುಖ, ಮಡಿವಾಳ, ಎಸ್.ಆರ್. ಕಾಲೋನಿ, ಆಲನಗರ, ವಿಜಾಪೂರ | ಸದಸ್ಯರು |
| 2 | ಶ್ರೀ ರಾಜಶೇಖರ ಭಜಂತ್ರಿ, ಗ್ಯಾಂಗ್ ಬವಡಿ, ವಿಜಾಪೂರ | ಸದಸ್ಯರು |
| 3 | ಶ್ರೀಮತಿ ಮಹಾದೇವಿ ಸೂರಪ್ಪ ಮಿರ್ಜಿ, ಜೋರಾಪೂರ ಪೇಠ, ವಿಜಾಪುರ ನಗರ | ಸದಸ್ಯರು |
| 4 | ಶ್ರೀ ಕೌಸರ ಶೇಖ್, ಜುಮ್ಮಾ ಮಸೀದಿ ಹತ್ತಿರ, ವಿಜಾಪೂರ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1602

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

**ಒಳಾಡಳಿತ ಸಚಿವಾಲಯ**

**ತಿದ್ದುಪಡಿ**

**ಸಂ. ಒಇ:69:ಪಿಪಿಇ:2005, ಬೆಂಗಳೂರು ದಿನಾಂಕ: 1ನೇ ಸೆಪ್ಟೆಂಬರ್ 2007**

ಕರ್ನಾಟಕ ನಾಗರೀಕ ಸೇವೆ (ಸಿಸಿಎ) ನಿಯಮಾವಳಿಯ ನಿಯಮ 26 ರಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ: 5–4–2007ರ ಸಮಸಂಖ್ಯೆಯ ಆದೇಶದ ಆದೇಶ ಭಾಗದ 5ನೇ ಸಾಲಿನಲ್ಲಿ ನಮೂದಿಸಿರುವ "18–4–2007ರಂದು" ಎಂಬುದರ ಬದಲಾಗಿ "18–4–2009ರಂದು" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಉಳಿದಂತೆ ಸದರಿ ಆದೇಶದಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1592

**ಆರ್.ಎ. ಕುಲಕರ್ಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, (ಪ್ರಭಾರ)

ಒಳಾಡಳಿತ ಇಲಾಖೆ

(ಕಾ ಮತ್ತು ಸು, ಕಾಫಿಪೋಸ ಮತ್ತು ಅಭಿಯೋಗ)

**ಶಿಕ್ಷಣ ಸಚಿವಾಲಯ**

**ತಿದ್ದೋಲೆ**

**ಸಂ.ಇಡಿ:170:ಎಲ್ಐಬಿ:2006, ಬೆಂಗಳೂರು ದಿನಾಂಕ: 21ನೇ ಆಗಸ್ಟ್ 2007**

ದಿನಾಂಕ: 27–11–2006ರ ಸರ್ಕಾರದ ಆದೇಶ ಸಂಖ್ಯೆ:ಇಡಿ 170 ಎಲ್ಐಬಿ 2006ರಲ್ಲಿನ ಕಂಡಿಕೆ 3(1)(l)ರಲ್ಲಿನ "ಭಾರತೀಯ ಇತರೆ ಭಾಷೆಯ ಪುಸ್ತಕಗಳಿಗೆ ಮುಖಪುಟದ ಬೆಲೆ ಮೇಲೆ ಶೇ. 25ರ ಸೋಡಿ" ಎಂಬ ಪದಗಳ ಬದಲಾಗಿ "ಆಂಗ್ಲ ಭಾಷೆಯ ಪುಸ್ತಕಗಳನ್ನು ಹೊರತುಪಡಿಸಿ ಭಾರತೀಯ ಇತರೆ ಭಾಷೆಯ ಪುಸ್ತಕಗಳಿಗೆ ಮೇಲ್ಕಂಡ ದರಗಳು ಅನ್ವಯವಾಗುತ್ತದೆ" ಎಂಬ ಪದಗಳನ್ನು ಪ್ರತಿಸ್ಥಾಪಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1591

**ಎಂ.ಎನ್. ಸೋಮಶೇಖರ್**

ಸರ್ಕಾರದ ಅಧೀನ ಕಾರ್ಯದರ್ಶಿಗಳು,

ಶಿಕ್ಷಣ ಇಲಾಖೆ

**ಲೋಕೋಪಯೋಗಿ ಸಚಿವಾಲಯ**

**ವಿಷಯ:** ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಸುಣ್ಣದಮನೆ ಕೌರಿಬೈಲು ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ಬಗ್ಗೆ.

**ಓದಲಾಗಿದೆ:** ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು, ಇವರ ಪತ್ರ ಸಂಖ್ಯೆ: ಮುಇಂ:ಸಂಕದ:ರಶಾ:ಸಇಂ.3:07–08, ದಿನಾಂಕ: 28–7–2007.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಹುಲಿಕಲ್‌ವರೆಗಿನ ರಸ್ತೆಯು ವರಾಹಿ ಜಲವಿದ್ಯುತ್ ಯೋಜನೆಯಡಿ ನಿರ್ಮಿಸಲಾದ ಮಾಣಿ ಅಣೆಕಟ್ಟೆಯ ಹಿನ್ನೀರಿನಲ್ಲಿ ಸ್ವಲ್ಪ ಭಾಗ ಮುಳುಗಡೆಯಾಗಿರುವುದರಿಂದ ಸದರಿ ಭಾಗದ ರಸ್ತೆಗೆ ಪರ್ಯಾಯವಾಗಿ ಸುಣ್ಣದಮನೆ – ಕೌರಿಬೈಲು ರಸ್ತೆ (5.01 ಕಿ.ಮೀ.ರಸ್ತೆ) ಯನ್ನು ನಿರ್ಮಿಸಿ, ಅಭಿವೃದ್ಧಿಪಡಿಸಿ ಇದುವರೆಗೂ ಕರ್ನಾಟಕ ವಿದ್ಯುತ್ ನಿಗಮದವರು ನಿರ್ವಹಿಸುತ್ತಿದ್ದರು ಹಾಗೂ ಸದರಿ ರಸ್ತೆಯು ನಿಗಮದ ವಶದಲ್ಲಿರುತ್ತದೆ. ಸದರಿ ರಸ್ತೆಯನ್ನು ಅಭಿವೃದ್ಧಿ ಮತ್ತು ಉನ್ನತೀಕರಿಸಲು ರೂ. 91.00 ಲಕ್ಷಗಳನ್ನು ಲೋಕೋಪಯೋಗಿ ಇಲಾಖೆಗೆ ನೀಡಲಾಗುವುದೆಂದು ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ) ಬೆಂಗಳೂರು ಇವರು ವರದಿ ಮಾಡಿರುತ್ತಾರೆ.

ಸದರಿ 5.01 ಕಿಮೀ ಉದ್ದದ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ ಕರ್ನಾಟಕ ವಿದ್ಯುತ್ ನಿಗಮ ಇವರಿಂದ ಲೋಕೋಪಯೋಗಿ ಇಲಾಖೆಗೆ ಹಸ್ತಾಂತರಿಸಲು ಕೋರಿರುತ್ತಾರೆ.

ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸುವ ವಿವರ ಈ ಕೆಳಕಂಡಂತಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ತೀರ್ಥಹಳ್ಳಿ ಹುಲಿಕಲ್ ರಸ್ತೆ (Missing Link) ಸುಣ್ಣದಮನೆ ಕೌರಿಬೈಲು ರಸ್ತೆ | 5.01 |

**ಸರ್ಕಾರಿ ಆದೇಶ ಸಂಖ್ಯೆ: ಲೋಇ 382 ಸಿಆರ್ಎಂ 2007, ಬೆಂಗಳೂರು, ದಿನಾಂಕ: 6ನೇ ಸೆಪ್ಟೆಂಬರ್ 2007**

ಈ ಹಿನ್ನೆಲೆಯಲ್ಲಿ ಮುಖ್ಯ ಇಂಜಿನಿಯರ್, ಸಂಪರ್ಕ ಮತ್ತು ಕಟ್ಟಡ (ದಕ್ಷಿಣ), ಬೆಂಗಳೂರು ಇವರು ಸಲ್ಲಿಸಿರುವ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡ ಗ್ರಾಮೀಣ ರಸ್ತೆಯನ್ನು ಜಿಲ್ಲಾ ಮುಖ್ಯ ರಸ್ತೆಯನ್ನಾಗಿ ಮೇಲ್ದರ್ಜೆಗೇರಿಸಿ, ಲೋಕೋಪಯೋಗಿ ಇಲಾಖೆಯ ವ್ಯಾಪ್ತಿಗೆ ನಿಯಮಾನುಸಾರ ತೆಗೆದುಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

| ಕ್ರಮ ಸಂಖ್ಯೆ | ರಸ್ತೆಯ ಹೆಸರು | ಉದ್ದ ಕಿಮೀ |
|---|---|---|
| 1 | ತೀರ್ಥಹಳ್ಳಿ ಹುಲಿಕಲ್ ರಸ್ತೆ (Missing Link) ಸುಣ್ಣದಮನೆ ಕೌರಿಬೈಲು ರಸ್ತೆ | 5.01 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1634

**ಎಸ್.ಜಿ. ನಾರಾಯಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಸಂಪರ್ಕ)

**ವಸತಿ ಸಚಿವಾಲಯ**

**ವಿಷಯ:** ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ:** ಸರ್ಕಾರದ ಆದೇಶ ಸಂ. ವಇ/42/ಹೆಚ್‌ಎಎಂ/1998, ದಿನಾಂಕ: 10-4-2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಪಟ್ಟಣ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ. ವಇ/56/ಹೆಚ್‌ಎಎಸ್/2007, ಬೆಂಗಳೂರು, ದಿನಾಂಕ: 27ನೇ ಆಗಸ್ಟ್ 2007**

ಮೇಲ್ಕಂಡ ಸಂದರ್ಭದಲ್ಲಿ ಶಿವಮೊಗ್ಗ ಜಿಲ್ಲೆ, ಶಿಕಾರಿಪುರ ತಾಲ್ಲೂಕಿನ ಪಟ್ಟಣ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಗೋವಿಂದಪ್ಪ ಬಿನ್ ಹನುಮಂತಪ್ಪ, ರಂಗನಾಥಪುರ ಕಾಲೋನಿ, ಶಿಕಾರಿಪುರ | ಸದಸ್ಯರು |
| 2 | ಶ್ರೀ ಕೆ. ವೆಂಕಟೇಶ್ ಬಿನ್ ನಾರಾಯಣಪ್ಪ, ಜಯನಗರ, ಶಿಕಾರಿಪುರ | ಸದಸ್ಯರು |
| 3 | ಶ್ರೀ ಜಿ. ಅನ್ವರ್ ಸಾಬ್ ಬಿನ್ ರೆಹಮಾನ್ ಸಾಬ್, ತೇರು ಬೀದಿ, ಹೊನ್ನಾಳಿ ರಸ್ತೆ, ಶಿಕಾರಿಪುರ | ಸದಸ್ಯರು |
| 4 | ಶ್ರೀಮತಿ ಮಂಜುಳ ಕೋಂ ಬಿ.ಹೆಚ್. ನಾಗರಾಜ್, ಚನ್ನಕೇಶವ ನಗರ, ಶಿಕಾರಿಪುರ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1633

**ರಂಗಮ್ಮ**

ಪೀಠಾಧಿಕಾರಿ-2, ವಸತಿ ಇಲಾಖೆ

**PLANNING & STATISTICS SECRETARIAT**

**CORRIGENDUM**

**No. PD 15 PMM 2007, Bangalore, 25th August 2007**

In the G.O. No. PD 15 PMM 2007, Dated: 02-7-2007 at para 1 (c) instead of the words "Principal Secretary, Agriculture" the words "Commissioner of Agriculture" may be substituted.

By order and in the name of the Governor of Karnataka,

PR. 1630

**M.R. MAHESHKUMAR**

Under Secretary to Government-1&2,

Planning & Statistics Department.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** 2007-08ನೇ ಸಾಲಿನ ಹೊಸ ಯೋಜನೆಗಳು -ಹೆಚ್ಚುವರಿ ಯೋಜನೆಗಳಿಗೆ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 137 ಕಸನಿ 2007, ದಿ: 26-7.2007.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 26-7-2007ರ ಸರ್ಕಾರಿ ಆದೇಶದಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ 2007-08ನೇ ಸಾಲಿನ ಆಯವ್ಯಯದಲ್ಲಿ ಪ್ರಕಟಿಸಿ ಹಂಚಿಕೆ ಮಾಡಲಾದ 27 ಹೊಸ ಯೋಜನೆಗಳಿಗೆ ತಾತ್ವಿಕ ಅನುಮೋದನೆ ನೀಡಲಾಗಿತ್ತು. ಆನಂತರ ಈ ಕೆಳಕಂಡ ಹೆಚ್ಚುವರಿ ಯೋಜನೆಗಳನ್ನು ಸರ್ಕಾರವು ಪ್ರಕಟಿಸಿದೆ.

| ಕ್ರಮ ಸಂಖ್ಯೆ | ಯೋಜನೆ ವಿವರ | ಹಂಚಿಕೆ ಮಾಡಲಾದ ಅನುದಾನದ ಮೊತ್ತ (ಲಕ್ಷ ರೂ.ಗಳಲ್ಲಿ) |
|---|---|---|
| 1 | ಶ್ರೀ ಎಂ. ಗೋಪಾಲಕೃಷ್ಣ ಅಡಿಗರ ಸಮಗ್ರ ಸಾಹಿತ್ಯ ಪ್ರಕಟಣೆಗೆ | 50.00 |
| 2 | ಶ್ರೀ ಕೆ.ಎಸ್. ನರಸಿಂಹಸ್ವಾಮಿಯವರ ಸಮಗ್ರ ಸಾಹಿತ್ಯ ಪ್ರಕಟಣೆಗೆ | 10.00 |
| 3 | ಡಾ॥ ರಂ.ಶ್ರೀ ಮುಗಳಿಯವರ ಸಮಗ್ರ ಸಾಹಿತ್ಯ ಪ್ರಕಟಣೆಗೆ | 10.00 |
| 4 | ಪುಣೆ ಕನ್ನಡ ಸಂಘ ಸಭಾಂಗಣ ನಿರ್ಮಾಣಕ್ಕೆ | 10.00 |
| 5 | ಡಾ॥ ಡಿ.ವಿ. ಗುಂಡಪ್ಪ ಪ್ರತಿಷ್ಠಾನ ಸ್ಥಾಪನೆಗೆ | 20.00 |
| 6 | ಶ್ರೀ ಪಿ. ಕಾಳಿಂಗರಾವ್‌ರವರ ಹೆಸರಿನಲ್ಲಿ ಸಂಗೀತೋತ್ಸವ ಆಚರಣೆಗೆ | 50.00 |
| 7 | ಬೆಂಗಳೂರಿನ ಮಿಥಿಕ್ ಸೊಸೈಟಿಯ ಶತಮಾನೋತ್ಸವ ಆಚರಣೆಗೆ | 100.00 |
| 8 | ಮೈಸೂರು ಅನಂತಸ್ವಾಮಿಯವರ ಹೆಸರಿನಲ್ಲಿ ಸಂಗೀತೋತ್ಸವ ಕಾರ್ಯಕ್ರಮಕ್ಕೆ | 50.00 |
| 9 | ಧಾರವಾಡ ಜಿಲ್ಲೆಯ ಜೈನ ಯಾತ್ರಾಸ್ಥಳ ವರೂರಿನ ಅಭಿವೃದ್ಧಿ | 200.00 |
| | ಒಟ್ಟು | **500.00** |

ಮೇಲಿನ ಹೊಸ ಯೋಜನೆಗಳಿಗೆ ತಾತ್ವಿಕ ಅನುಮೋದನೆ ನೀಡುವ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ. ಕಸಂವಾಪ್ರ 137 ಕಸನಿ 2007, (ಭಾ) ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 1007.**

ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ವತಿಯಿಂದ 2007–08ನೇ ಸಾಲಿನಲ್ಲಿ ಕೈಗೊಳ್ಳಲಾಗುವ ಪ್ರಸ್ತಾವನೆಯಲ್ಲಿ ವಿವರಿಸಲಾದ 9 ಹೊಸ ಯೋಜನೆಗಳಿಗೆ ಸರ್ಕಾರದ ತಾತ್ವಿಕ ಅನುಮೋದನೆಯನ್ನು ಈ ಮೂಲಕ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿಗಳ ಸಂಖ್ಯೆ: ಆಇ 1418 ವೆಚ್ಚ–5/2007 ದಿನಾಂಕ: 8–8–2007 ಮತ್ತು ಆಇ 1343 ವೆಚ್ಚ–5/2007 ದಿನಾಂಕ: 4–9–2007 ರಂದು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1664

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಶಿಕ್ಷಣ ಸಚಿವಾಲಯ**

**ವಿಷಯ :** ಕುಶಾಲನಗರ, ರಾಯಚೂರು, ಹಾವೇರಿ ಮತ್ತು ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ಇಲ್ಲಿಗೆ ಹೊಸದಾಗಿ ಮಂಜೂರಾಗಿರುವ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳಿಗೆ ಇಲ್ಲಿಗೆ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಟಿಇಸಿ 2007, ದಿ: 6–7–2007.
2. ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಟಿಇಸಿ 2000(1), ದಿ: 12–7–2007.
3. ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಟಿಇಸಿ 2000(2), ದಿ: 12–7–2007.
4. ಸರ್ಕಾರಿ ಆದೇಶ ಸಂಖ್ಯೆ: ಇಡಿ 60 ಟಿಇಸಿ 2007, ದಿ: 12–7–2007.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಿಂದ (4)ರ ವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ ಕ್ರಮವಾಗಿ ಕುಶಾಲನಗರ, ರಾಯಚೂರು, ಹಾವೇರಿ ಮತ್ತು ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ಇಲ್ಲಿ ಹೊಸದಾಗಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳನ್ನು 2007–08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಸ್ಥಾಪನೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ಹಿನ್ನೆಲೆಯಲ್ಲಿ ಮೇಲೆ ತಿಳಿಸಲಾದ ಹೊಸ ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಮಂಜೂರಾದ ಕೋರ್ಸುಗಳನ್ನು ಪ್ರಾರಂಭ ಮಾಡುವ ಸಲುವಾಗಿ ಅವಶ್ಯವಿರುವ ಬೋಧಕ ಹಾಗೂ ಬೋಧಕೇತರ ಹುದ್ದೆಗಳನ್ನು ಮಂಜೂರು ಮಾಡುವ ಸಲುವಾಗಿ ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ. ಇಡಿ 60 ಟಿಇಸಿ 2007, ಬೆಂಗಳೂರು, ದಿನಾಂಕ: 24ನೇ ಆಗಸ್ಟ್ 2007**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕುಶಾಲನಗರ, ರಾಯಚೂರು, ಹಾವೇರಿ ಮತ್ತು ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ಇಲ್ಲಿ ಹೊಸದಾಗಿ ಸರ್ಕಾರಿ ಇಂಜಿನಿಯರಿಂಗ್ ಕಾಲೇಜುಗಳನ್ನು 2007–08ನೇ ಶೈಕ್ಷಣಿಕ ಸಾಲಿನಿಂದ ಜಾರಿಗೆ ಬರುವಂತೆ ಪ್ರತಿ ಇಂಜಿನಿಯರಿಂಗ್ ಕಾಲೇಜಿನಲ್ಲಿ ನಾಲ್ಕು ಕೋರ್ಸುಗಳೊಂದಿಗೆ ಪ್ರಾರಂಭ ಮಾಡಲು ಅನುಬಂಧದಲ್ಲಿ ಸೂಚಿಸಿರುವಂತೆ ನಾಲ್ಕು ಕೋರ್ಸುಗಳಿಗೆ ಅವಶ್ಯವಿರುವ ಬೋಧಕ ಹಾಗೂ ಬೋಧಕೇತರ ಹುದೆಗಳನ್ನು ಸೃಜಿಸಿ ಮಂಜೂರು ಮಾಡಲಾಗಿದೆ.

ಈ ಹುದ್ದೆಗಳನ್ನು ನಿಯಮಾನುಸಾರ ಭರ್ತಿ ಮಾಡಲು ಸಹ ಮಂಜೂರಾತಿ ನೀಡಲಾಗಿದೆ. ಬೋಧಕೇತರ ಹುದ್ದೆಗಳಲ್ಲಿ ಶೇ. 50% ಹುದ್ದೆಗಳನ್ನು ಮಾತ್ರ ಈಗ ಭರ್ತಿ ಮಾಡತಕ್ಕದ್ದು ಹಾಗೂ ಉಳಿದ ಹುದ್ದೆಗಳನ್ನು ಸರ್ಕಾರದ ಸ್ಪಷ್ಟ ಆದೇಶ ಪಡೆದ ನಂತರವೇ ಭರ್ತಿ ಮಾಡತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಈ ಸಂಬಂಧ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವುದನ್ನು ಕಾಯ್ದಿರಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ
(ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ.)

**ಸರ್ಕಾರಿ ಆದೇಶ ಸಂಖ್ಯೆ. ಇಡಿ 60 ಟಿಇಸಿ 2007, ಬೆಂಗಳೂರು, ದಿನಾಂಕ: 24–8–2007ರ ಅನುಬಂಧ**
**(ನಾಲ್ಕು ಕೋರ್ಸುಗಳಿಗೆ ಅಗತ್ಯವಿರುವ ಬೋಧಕ, ಬೋಧಕೇತರ ಹಾಗೂ ಆಡಳಿತ ಸಿಬ್ಬಂದಿಗಳ ಸಂಖ್ಯಾವಾರು ವಿವರ)**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಕೋರ್ಸುಗಳು | | | |
|---|---|---|---|---|---|
| | | ಸಿವಿಲ್ | ಮೆಕ್ಯಾನಿಕಲ್ | ಇ & ಸಿ | ಕಂಪ್ಯೂಟರ್ ಸೈನ್ಸ್ |
| 1 | 2 | 3 | 4 | 5 | 6 |
| 01 | ಪ್ರಾಧ್ಯಾಪಕರು | 2 | 2 | 1 | 1 |
| 02 | ಸಹಾಯಕ ಪ್ರಾಧ್ಯಾಪಕರು | 4 | 4 | 4 | 2 |
| 03 | ಉಪನ್ಯಾಸಕರು | 10 | 9 | 9 | 4 |
| 04 | ಫೋರ್‌ಮನ್ | 1 | 1 | 1 | 1 |
| 05 | ಇನ್‌ಸ್ಟ್ರಕ್ಟರ್ | 2 | 3 | 1 | 1 |
| 06 | ಸಹಾಯಕ ಇನ್‌ಸ್ಟ್ರಕ್ಟರ್ | 4 | 3 | 1 | – |
| 07 | ಮೆಕ್ಯಾನಿಕ್ | 4 | 3 | 1 | 2 |
| 08 | ಹೆಲ್ಪರ್ | 8 | 10 | 4 | 3 |
| 09 | ಡ್ರಾಫ್ಟ್‌ಮನ್ | 1 | – | – | – |
| | ಒಟ್ಟು | 36 | 35 | 22 | 14 |

**ಸಾಮಾನ್ಯ ಸಿಬ್ಬಂದಿ ವರ್ಗ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 01 | ಪ್ಲೇಸ್‌ಮೆಂಟ್ ಮತ್ತು ಟ್ರೈನಿಂಗ್ ಅಧಿಕಾರಿ | 1 |
| 02 | ಉಪನ್ಯಾಸಕರು (ಜಿಯಾಲಜಿ) | 1 |
| 03 | ಉಪನ್ಯಾಸಕರು (ಆಂಗ್ಲ ಭಾಷೆ) | 1 |
| 04 | ಉಪನ್ಯಾಸಕರು (ವಿಜ್ಞಾನ ಮತ್ತು ಗಣಿತ) | 2 |

**ಆಡಳಿತ ಸಿಬ್ಬಂದಿ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 01 | ಪ್ರಾಂಶುಪಾಲರು | 1 |

| | | |
|---|---|---|
| 02 | ಸಹಾಯಕ ಆಡಳಿತಾಧಿಕಾರಿ | 1 |
| 03 | ರಿಜಿಸ್ಟ್ರಾರ್ | 2 |
| 04 | ಅಧೀಕ್ಷಕರು | 4 |
| 05 | ಪ್ರಥಮ ದರ್ಜೆ ಸಹಾಯಕರು | 8 |
| 06 | ದ್ವಿತೀಯ ದರ್ಜೆ ಸಹಾಯಕರು | 10 |
| 07 | ಶೀಘ್ರಲಿಪಿಗಾರರು | 1 |
| 08 | ಬೆರಳಚ್ಚುಗಾರರು | 2 |
| 09 | ಕಛೇರಿ ಸಹಾಯಕರು | 2 |
| 10 | ಸೇವಕರು/ ಜಾಡುಮಾಲಿ | 10 |
| 11 | ವಾಹನ ಚಾಲಕರು | 5 |

**ವರ್ಷವಾರು ನೇಮಕ ಮಾಡಬೇಕಾದ ಸಿಬ್ಬಂದಿ ವಿವರ**

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | 1ನೇ ವರ್ಷ | 2ನೇ ವರ್ಷ | 3ನೇ ವರ್ಷ | 4ನೇ ವರ್ಷ |
|---|---|---|---|---|---|
| 1 | 2 | 3 | 4 | 5 | 6 |
| 01 | ಪ್ರಾಂಶುಪಾಲರು | 1 | – | – | – |
| 02 | ಪ್ರಾಧ್ಯಾಪಕರು | 2 | 2 | 1 | 1 |
| 03 | ಸಹಾಯಕ ಪ್ರಾಧ್ಯಾಪಕರು | 4 | 4 | 4 | 2 |
| 04 | ಉಪನ್ಯಾಸಕರು | 12 | 9 | 9 | 6 |
| 05 | ಫೋರ್‌ಮನ್ | 2 | 1 | 1 | – |
| 06 | ಇನ್‌ಸ್ಟ್ರಕ್ಟರ್ | 2 | 2 | 2 | 1 |
| 07 | ಸಹಾಯಕ ಇನ್‌ಸ್ಟ್ರಕ್ಟರ್ | 2 | 2 | 2 | 2 |
| 08 | ಮೆಕ್ಯಾನಿಕ್ | 4 | 2 | 2 | 2 |
| 09 | ಹೆಲ್ಪರ್ | 10 | 9 | 4 | 2 |
| 10 | ಡ್ರಾಫ್ಟ್‌ಮನ್ | – | 1 | – | – |
| 11 | ಪ್ಲೇಸ್‌ಮೆಂಟ್ ಮತ್ತು ಟ್ರೈನಿಂಗ್ ಆಫೀಸರ್ | – | 1 | – | – |
| 12 | ಸಹಾಯಕ ಆಡಳಿತಾಧಿಕಾರಿ | 1 | – | – | – |
| 13 | ಎಜಿಸ್ಟ್ರಾರ್ | 1 | 1 | – | – |
| 14 | ಅಧೀಕ್ಷಕರು | 2 | 2 | – | – |
| 15 | ಪ್ರಥಮ ದರ್ಜೆ ಸಹಾಯಕರು | 4 | 2 | 2 | – |
| 16 | ದ್ವಿತೀಯ ದರ್ಜೆ ಸಹಾಯಕರು | 4 | 4 | 2 | – |
| 17 | ಶೀಘ್ರಲಿಪಿಗಾರರು | 1 | – | – | – |
| 18 | ಬೆರಳಚ್ಚುಗಾರರು | 1 | 1 | – | – |
| 19 | ವಾಹನ ಚಾಲಕರು | 2 | 1 | 2 | – |
| 20 | ಅಟೆಂಡರ್ | 1 | 1 | – | – |
| 21 | ಸೇವಕರು | 5 | 3 | 2 | – |
| | **ಒಟ್ಟು** | **61** | **48** | **33** | **16** |

ಪಿ.ಆರ್.1598

**ಎಂ.ಪಿ. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ
(ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ.)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ :** ಕಾನೂನು ಇಲಾಖೆಯಲ್ಲಿನ ಭೂಸ್ವಾಧೀನ ಪ್ರಕರಣಗಳನ್ನು ಕಂದಾಯ ಇಲಾಖೆಯ ಕಾನೂನು ಕೋಶಕ್ಕೆ ವರ್ಗಾವಣೆ ವ್ಯಾಜ್ಯ-2 ಶಾಖೆಯ ಸಿಬ್ಬಂದಿಯನ್ನು ಕಂದಾಯ ಇಲಾಖೆ ಕಾನೂನು ಕೋಶಕ್ಕೆ ವರ್ಗಾಯಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 75 ಸಸಿವಿ 2006, ದಿನಾಂಕ: 23-1-2007.
2. ಅಧಿಸೂಚನೆ ಸಂಖ್ಯೆ: ಲಾ 74 ಎಲ್ಎಎಂ 2007, ದಿನಾಂಕ: 8-6-2007.
3. ಸುತ್ತೋಲೆ ಸಂಖ್ಯೆ: ಲಾ 74 ಎಲ್ಎಎಂ 2006, ದಿನಾಂಕ: 12-6-2007.
4. ಅಧಿಕೃತ ಜ್ಞಾಪನ ಸಂಖ್ಯೆ: ಲಾ 103 ಎಲ್ಎಎಂ 2007, ದಿನಾಂಕ: 28-7-2007.
5. ಕಾನೂನು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಆರ್‌ಡಿ 10 ಎಂಐಎಸ್‌ಸಿ 2007, ದಿನಾಂಕ: 24-7-2007.
6. ಕಾನೂನು ಇಲಾಖೆಯ ಟಿಪ್ಪಣಿ ಸಂಖ್ಯೆ: ಲಾ 103 ಎಲ್ಎಎಂ 2007, ದಿನಾಂಕ: 25-8-2007.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ದಿನಾಂಕ: 23-1-2007ರ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕಂದಾಯ ಇಲಾಖೆಯ ಕಾನೂನು ಕೋಶಕ್ಕೆ ಸಿವಿಲ್ ಜಡ್ಜ್ ವೇತನ ಶ್ರೇಣಿ ರೂ.9000-14550ರಲ್ಲಿ ಎರಡು ಕಾನೂನು ಅಧಿಕಾರಿಗಳ ಹುದ್ದೆಗಳನ್ನು ಒಂದು ವರ್ಷದ ಅವಧಿಯವರೆಗೆ ಅಥವಾ ಮುಂದಿನ ಆದೇಶದವರೆಗೆ ತಾತ್ಕಾಲಿಕವಾಗಿ ಸೃಜಿಸಲಾಗಿರುತ್ತದೆ. ಮುಂದುವರೆದು ಮೇಲೆ (2)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ: 8-6-2007ರಲ್ಲಿ ಕಾನೂನು ಇಲಾಖೆಯ ವ್ಯಾಜ್ಯ-2 ಶಾಖೆಯಲ್ಲಿ ನಿರ್ವಹಿಸಲಾಗುತ್ತಿದ್ದ ಭೂಸ್ವಾಧೀನ ಪ್ರಕರಣಗಳನ್ನು ಕಂದಾಯ ಇಲಾಖೆಯ ಕಾನೂನು ಕೋಶದ ಮುಖ್ಯಸ್ಥರು ನಿರ್ವಹಿಸಲು ಕರ್ನಾಟಕ ಕಂಡಕ್ಟ್ ಆಫ್ ಗವರ್ನ್‌ಮೆಂಟ್ ಲಿಟಿಗೇಶನ್ ರೂಲ್ಸ್‌ನ 1998ರ ನಿಯಮ 16ಕ್ಕೆ ಸೂಕ್ತ ತಿದ್ದುಪಡಿಯನ್ನು ತರಲಾಗಿದೆ. ಅದರಂತೆ ಮೇಲೆ (3)ರಿಂದ (5)ರಲ್ಲಿ ಓದಲಾದ ಪತ್ರಗಳಲ್ಲಿ ವ್ಯವಹರಿಸಿ ಕಾನೂನು ಇಲಾಖೆಯ ವ್ಯಾಜ್ಯ-2 ಶಾಖೆಯಲ್ಲಿನ ಉಳಿದ ವಿಷಯಗಳನ್ನು ಇಲಾಖೆಯ ವ್ಯಾಜ್ಯ-6 ಮತ್ತು ವ್ಯಾಜ್ಯ-7 ಶಾಖೆಗಳಿಗೆ ಹಂಚಲಾಗಿರುತ್ತದೆ. ಕಾರಣ ಮೇಲೆ (6)ರಲ್ಲಿ ಓದಲಾದ ಕಾನೂನು ಇಲಾಖೆಯ ಟಿಪ್ಪಣಿ ದಿನಾಂಕ: 25-8-2007ರಲ್ಲಿ ವ್ಯಾಜ್ಯ-2 ಶಾಖೆಯಲ್ಲಿ ಕೆಲಸ ನಿರ್ವಹಿಸುತ್ತಿರುವ ಕೆಳಕಂಡ ಸಿಬ್ಬಂದಿಯನ್ನು ಕಾನೂನು ಇಲಾಖೆಯಿಂದ ಕಂದಾಯ ಇಲಾಖೆಯ ಕಾನೂನು ಕೋಶಕ್ಕೆ ವರ್ಗಾಯಿಸಲು ಕ್ರಮ ಕೈಗೊಳ್ಳುವಂತೆ ಕೋರಲಾಗಿರುತ್ತದೆ:

| | | |
|---|---|---|
| 1 | ಶ್ರೀ ಆನಂದರಾಜು | ಶಾಖಾಧಿಕಾರಿ |
| 2 | ಶ್ರೀ ಚಿಕ್ಕರಂಗೇಗೌಡ | ಹಿರಿಯ ಸಹಾಯಕರು |
| 3 | ಶ್ರೀಮತಿ ಇಂದಿರಮ್ಮ | ಹಿರಿಯ ಸಹಾಯಕರು |
| 4 | ಶ್ರೀ ರಾಮಚಂದ್ರ | ಸಹಾಯಕರು |
| 5 | ಶ್ರೀಮತಿ ನಾಗರತ್ನ | ಸಹಾಯಕರು |
| 6 | ಶ್ರಿ ಸಚ್ಚಿದಾನಂದ | ಕಿರಿಯ ಸಹಾಯಕರು |
| 7 | ಶ್ರೀಮತಿ ಲೋಲಾಕ್ಷಮ್ಮ | ಹಿರಿಯ ಬೆರಳಚ್ಚುಗಾರರು |
| 8 | ಶ್ರೀಮತಿ ಅನಸೂಯದೇವಿ | ಹಿರಿಯ ಬೆರಳಚ್ಚುಗಾರರು |
| 9 | ಶ್ರೀ ಕೆ. ಮುನಿರತ್ನಂ | ದಲಾಯತ್ |

ಅಂತೆಯೇ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 133 ಆಸಸೇ 2007, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್ 2007**

ಕರ್ನಾಟಕ ಸರ್ಕಾರದ ಸಚಿವಾಲಯ, ಕಾನೂನು ಇಲಾಖೆಯ ವ್ಯಾಜ್ಯ-2 ಶಾಖೆಯಲ್ಲಿ ನಿರ್ವಹಿಸಲಾಗುತ್ತಿದ್ದ ವಿಷಯವನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 74 ಎಲ್ಅಎಂ 2006, ದಿನಾಂಕ: 8-6-2007ರಲ್ಲಿ ಕಂದಾಯ ಇಲಾಖೆಯ ಕಾನೂನು ಕೋಶ ಶಾಖೆಯಲ್ಲಿ ನಿರ್ವಹಿಸಲು Karnataka Conduct of Government Litigation Rules, 1998ಕ್ಕೆ ತಿದ್ದುಪಡಿ ತಂದಿರುವುದರಿಂದ, ವ್ಯಾಜ್ಯ-2 ಶಾಖೆಯಲ್ಲಿನ ಕೆಳಕಂಡ ಹುದ್ದೆಗಳನ್ನು ಈ ಕೂಡಲೆ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಕಂದಾಯ ಇಲಾಖೆಯ ಕಾನೂನು ಕೋಶಕ್ಕೆ ಸ್ಥಳಾಂತರಿಸಲಾಗಿದೆ. ಅಲ್ಲದೆ ಪ್ರಸ್ತುತ ಹುದ್ದೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿಗಳನ್ನು ಸ್ಥಳಾಂತರದ ಎದುರಿನ ಹುದ್ದೆಗಳಿಗೆ ಮರುಸ್ಥಳನಿಯುಕ್ತಿಗೊಳಿಸಿ ನೇಮಿಸಲಾಗಿದೆ.

| ಕ್ರ.ಸಂ. | ಸ್ಥಳಾಂತರಿಸಿದ ಹುದ್ದೆಗಳು | ಮರುನಿಯುಕ್ತಿಗೊಳಿಸಲಾದ ಅಧಿಕಾರಿ/ನೌಕರರು |
|---|---|---|
| 1 | ಶಾಖಾಧಿಕಾರಿ | ಶ್ರೀ ಆನಂದರಾಜು, ಶಾಖಾಧಿಕಾರಿ |
| 2 | ಹಿರಿಯ ಸಹಾಯಕ | ಶ್ರೀ ಚಿಕ್ಕರಂಗೇಗೌಡ, ಹಿರಿಯ ಸಹಾಯಕರು |

| | | |
|---|---|---|
| 3 | ಹಿರಿಯ ಸಹಾಯಕ | ಶ್ರೀಮತಿ ಬಿ.ಎ. ಇಂದಿರಾಂಬ, ಹಿರಿಯ ಸಹಾಯಕಿ |
| 4 | ಸಹಾಯಕ | ಶ್ರೀ ರಾಮಚಂದ್ರ, ಸಹಾಯಕರು |
| 5 | ಸಹಾಯಕ | ಶ್ರೀಮತಿ ನಾಗರತ್ನ, ಸಹಾಯಕಿ |
| 6 | ಕಿರಿಯ ಸಹಾಯಕ | ಶ್ರೀ ಹೆಚ್.ಎ. ಸಚ್ಚಿದಾನಂದಮೂರ್ತಿ, ಕಿರಿಯ ಸಹಾಯಕರು |
| 7 | ಹಿರಿಯ ಬೆರಳಚ್ಚುಗಾರ | ಶ್ರೀಮತಿ ಆರ್. ಲೋಲಾಕ್ಷಮ್ಮ, ಹಿರಿಯ ಬೆರಳಚ್ಚುಗಾರರು |
| 8 | ಹಿರಿಯ ಬೆರಳಚ್ಚುಗಾರ | ಶ್ರೀಮತಿ ಪಿ. ಅನಸೂಯದೇವಿ, ಹಿರಿಯ ಬೆರಳಚ್ಚುಗಾರರು |
| 9 | ದಲಾಯತ್ | ಶ್ರೀ ಕೆ. ಮುನಿರತ್ನಂ, ದಲಾಯತ್ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1665

**ಎಂ.ಪಿ. ಗೋವಿಂದರಾಜು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಡಳಿತ–1)

## ತೋಟಗಾರಿಕೆ ಸಚಿವಾಲಯ

**ವಿಷಯ:** 2007–08ನೇ ಸಾಲಿನಲ್ಲಿ "ಅಂತರರಾಷ್ಟ್ರೀಯ ಕೃಷಿ ವ್ಯಾಪಾರ ಮೇಳ" (ಲೆಕ್ಕಶೀರ್ಷಿಕೆ 2401–00–800–2–35 –ಹೊಸ ಯೋಜನೆಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** ತೋಟಗಾರಿಕೆ ನಿರ್ದೇಶಕರ ಪತ್ರ ಸಂಖ್ಯೆ: ತೋಇ/ಯೋ/ಸತೋಅ–1/15/2007–08 ದಿ: 28–4–2007.

**ಪ್ರಸ್ತಾವನೆ:**

1. ಕರ್ನಾಟಕ ಸರ್ಕಾರದ ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ ಹಣಕಾಸು ಸಚಿವರು 2007–08ನೇ ಸಾಲಿನ ಆಯವ್ಯಯ ಭಾಷಣದ ಪ್ಯಾರಾ 50ರಲ್ಲಿ ಕೃಷಿ, ತೋಟಗಾರಿಕೆ, ಪಶುಸಂಗೋಪನೆ, ರೇಷ್ಮೆ, ಮೀನುಗಾರಿಕೆ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಉತ್ಪಾದನೆ, ಸಂಸ್ಕರಣೆ, ಸಂಗ್ರಹಣೆ ಮತ್ತು ಮಾರುಕಟ್ಟೆ ತಂತ್ರಜ್ಞಾನಗಳನ್ನು ಜನಪ್ರಿಯಗೊಳಿಸಲು ಕರ್ನಾಟಕ ಕೃಷಿ ವಾಣಿಜ್ಯಮೇಳ ಪ್ರಾಧಿಕಾರವನ್ನು ಸ್ಥಾಪಿಸಲು ಉದ್ದೇಶಿಸಿರುವುದಾಗಿ, ಮುಂಗಾರು ಮತ್ತು ಹಿಂಗಾರು ಕೃಷಿ ವಾಣಿಜ್ಯ ಮೇಳಗಳನ್ನು ಸಂಘಟಿಸುವ ಜವಾಬ್ದಾರಿ ಈ ಪ್ರಾಧಿಕಾರದ್ದಾಗಿರುತ್ತದೆ. ಬೆಂಗಳೂರಿನ ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ಬಳಿಯಿರುವ ಪೂಜೇನಹಳ್ಳಿ ತೋಟಗಾರಿಕೆ ಕೇಂದ್ರವನ್ನು ಶಾಶ್ವತ ವಾಣಿಜ್ಯ ಮೇಳೆ ತಾಣವನ್ನಾಗಿ ಅಭಿವೃದ್ಧಿಪಡಿಸಲಾಗುವುದೆಂದು ಘೋಷಿಸಿರುತ್ತಾರೆ. ಈ ಉದ್ದೇಶಕ್ಕಾಗಿ 2007–08ನೇ ಸಾಲಿನ ಆಯವ್ಯಯದಲ್ಲಿ ರೂ. 500.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ.
2. ಮೇಲೆ ಓದಲಾದ ಪತ್ರದಲ್ಲಿ ತೋಟಗಾರಿಕೆ ನಿರ್ದೇಶಕರು ಸದರಿ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾರ್ಯಕ್ರಮದ ವಿವರಗಳನ್ನು ರೂಪಿಸಿ ಹೊಸ ಯೋಜನೆಗೆ ಸರ್ಕಾರದ ಮಂಜೂರಾತಿ ಕೋರಿ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.
3. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕೃತೋಇ 80 ತೊಯೋಕಾ 2007, ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2007**

1. ತೋಟಗಾರಿಕೆ ಇಲಾಖೆಯ ಯೋಜನಾಂಶಗಳಡಿ 2007–08ನೇ ಸಾಲಿನಲ್ಲಿ "ಅಂತರರಾಷ್ಟ್ರೀಯ ಕೃಷಿ ವ್ಯಾಪಾರ ಮೇಳ" ಎಂಬ ಹೊಸ ಯೋಜನೆಯನ್ನು ಲೆಕ್ಕಶೀರ್ಷಿಕೆ 2401–00–800–2–35ರಡಿ ಲಭ್ಯವಿರುವ ರೂ. 500.00 ಲಕ್ಷಗಳನ್ನು ವಿನಿಯೋಗಿಸಿ ಕೆಳಕಂಡ ಮಾರ್ಗಸೂಚಿಗಳನ್ನು ಅನುಸರಿಸಿ ಅನುಷ್ಠಾನಗೊಳಿಸಲು ತೋಟಗಾರಿಕೆ ನಿರ್ದೇಶಕರಿಗೆ ಮಂಜೂರಾತಿ ನೀಡಲಾಗಿದೆ. ಯೋಜನೆಯ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ.
2. ಈ ಯೋಜನೆಯನ್ನು ಕಾರ್ಯಗತಗೊಳಿಸಲು "Green Life International, Poojenahally" ಎಂಬ ಸಂಸ್ಥೆಯನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರಡಿ ನೋಂದಾಯಿಸಿ ಸ್ಥಾಪಿಸಲು

ಅನುಮೋದನೆ ನೀಡಲಾಗಿದೆ. ವಿವರವಾದ ಪ್ರಾಜೆಕ್ಟ್ ವರದಿ ತಯಾರಿಸಿ, ಸಂಘ ನೋಂದಾಯಿಸಲು ಕ್ರಮ ವಹಿಸಿ ನಂತರ ಹಣ ಬಿಡುಗಡೆ ಪ್ರಸ್ತಾವನೆಯನ್ನು ಸರ್ಕಾರಕ್ಕೆ ಸಲ್ಲಿಸುವುದು.

3. ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂಖ್ಯೆ: ಪಿಡಿ/20/ಪಿಎಫ್‌ಓ/2007 ದಿ: 23-5-2007, PD 6 IMM 2006, ದಿ: 4-4-2006 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 341 ವೆಚ್ಚ-4/07, ದಿ: 2-7-2007ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ತೋಟಗಾರಿಕೆ ಇಲಾಖೆ

**ಅನುಬಂಧ**

**(ಆದೇಶ ಸಂಖ್ಯೆ: ಕೃತೋಇ 80 ತೊಯೋಕಾ 2007 ಬೆಂಗಳೂರು, ದಿ: 7-8-2007.)**

**ಯೋಜನೆ:** "ಅಂತರಾಷ್ಟ್ರೀಯ ಕೃಷಿ ವ್ಯಾಪಾರ ಮೇಳ" ಎಂಬ ಹೊಸ ಯೋಜನೆ.

**ಲೆಕ್ಕ ಶೀರ್ಷಿಕೆ :** 2401-00-800-2-35.

**ಅನುದಾನ :** ರೂ. 500.00 ಲಕ್ಷಗಳು (ರೂ. ಐನೂರು ಲಕ್ಷಗಳು ಮಾತ್ರ)

**ಪ್ರಸ್ತಾವನೆ :** ಕರ್ನಾಟಕ ರಾಜ್ಯವು ತೋಟಗಾರಿಕೆಯು ಸೇರಿದಂತೆ ವಿವಿಧ ಕೃಷಿ ಉತ್ಪನ್ನಗಳು, ಪಶುಸಂಗೋಪನೆ, ಮೀನುಗಾರಿಕೆ, ರೇಷ್ಮೆ ಇತ್ಯಾದಿ ಉತ್ಪನ್ನಗಳಿಗೆ ಹೆಸರುವಾಸಿಯಾಗಿದೆ. ಕರ್ನಾಟಕ ರಾಜ್ಯವು ಹೊಸದಾಗಿ ಕೃಷಿ ನೀತಿಯನ್ನು ಜಾರಿಗೊಳಿಸಿ ವಿವಿಧ ತೋಟಗಾರಿಕೆ ಮತ್ತು ಕೃಷಿ ಸಂಬಂಧಿತ ಚಟುವಟಿಕೆಗಳಿಗೆ ಹೆಚ್ಚಿನ ಒತ್ತು ನೀಡಲು ಮತ್ತು ರೈತರ ವಿಶ್ವ ವ್ಯಾಪಾರೀಕರಣ ಹಾಗೂ ಮುಕ್ತ ಮಾರುಕಟ್ಟೆಗಳಿಗೆ ಸನ್ನದ್ಧರನ್ನಾಗಿ ಮಾಡುವ ಉದ್ದೇಶದಿಂದ ಈ ವಲಯದಲ್ಲಿ ಹೆಚ್ಚಿನ ಅಭಿವೃದ್ಧಿ ವೇಗವನ್ನು (Growth rate) ಸಾಧಿಸಲು ನೀತಿಯನ್ನು ರೂಪಿಸಲಾಗಿದೆ. ಬದಲಾಗುತ್ತಿರುವ ತೋಟಗಾರಿಕೆ ಮತ್ತು ಕೃಷಿ ವಹಿವಾಟಿನ ಪರಿಸರದಲ್ಲಿ ಮಾರುಕಟ್ಟೆ ಮತ್ತು ರಫ್ತಿಗೆ ಹೆಚ್ಚಿನ ಉತ್ತೇಜನ ನೀಡಲು ರಾಜ್ಯ ಸರ್ಕಾರವು ಕೈಗೊಂಡ ಹಲವಾರು ಕ್ರಮಗಳಲ್ಲಿ ಹಾಪ್‌ಕಾಮ್ಸ್, ತೋಟಗಾರಿಕೆ ಮಹಾಮಂಡಲ, ರೈತ ಸಂತೆ, ಸಫಲ್ ಮಾರುಕಟ್ಟೆ, ಕೆಫೆಕ್, ಐಫ್ಯಾಬ್ ಮುಂತಾದ ಸಂಸ್ಥೆಗಳ ಸ್ಥಾಪನೆ ಮತ್ತು ಬಲವರ್ದನೆ ಪ್ರಮುಖವಾಗಿದೆ. ಆದಾಗ್ಯೂ ವಿವಿಧ ಸ್ಥರಗಳಲ್ಲಿ ಎಂದರೆ ರಾಜ್ಯ, ರಾಷ್ಟ್ರ ಮತ್ತು ಅಂತರರಾಷ್ಟ್ರೀಯ ಮಟ್ಟದಲ್ಲಿ ಉಂಟಾಗುತ್ತಿರುವ ತೀವ್ರಗತಿ ಬೆಳವಣಿಗೆಗೆ ಸಮರ್ಪಕ ರೀತಿಯಲ್ಲಿ ಸ್ಪಂದಿಸಲು ಈ ಎಲ್ಲಾ ಸಂಸ್ಥೆಗಳು ಪರಸ್ಪರ ವಿಚಾರವಿನಿಮಯ ಮಾಡಿಕೊಳ್ಳುವ ಸಲುವಾಗಿ ಮತ್ತು ರೈತರಿಗೆ ಹಾಗೂ ಮಾರಾಟಗಾರರಿಗೆ ನೇರ ಸಂಪರ್ಕ ಕಲ್ಪಿಸುವಲ್ಲಿ ಅಗತ್ಯವಿರುವ ಏಕಗವಾಕ್ಷಿಯ ಕೊರತೆ ಇರುತ್ತದೆ. ಇದನ್ನು ಮನಗಂಡು ರಾಜ್ಯ ಸರ್ಕಾರವು 2007-08ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸಮಗ್ರ ತೋಟಗಾರಿಕೆ, ಕೃಷಿ ಹಾಗೂ ಕೃಷಿ ಸಂಬಂಧಿತ ವಲಯಗಳಲ್ಲಿನ ಉತ್ಪಾದನೆ, ಉತ್ಪಾದಕತೆ, ಸಂರಕ್ಷಣೆ, ಸಂಸ್ಕರಣೆ, ಮಾರುಕಟ್ಟೆ ಮತ್ತು ರಫ್ತು ಅಭಿವೃದ್ಧಿಪಡಿಸಲು ಅಗತ್ಯವಿರುವ ಏಕಗವಾಕ್ಷಿ ವ್ಯವಸ್ಥೆಯಾಗಿ ಕಾರ್ಯನಿರ್ವಹಿಸಲು ಕರ್ನಾಟಕ ಕೃಷಿ ವಾಣಿಜ್ಯ ಮೇಳ ಪ್ರಾಧಿಕಾರ ಸ್ಥಾಪಿಸಲು ತೀರ್ಮಾನಿಸಿರುತ್ತದೆ.

**ಯೋಜನೆಯ ಉದ್ದೇಶಗಳು:**

1. ತೋಟಗಾರಿಕೆ, ಕೃಷಿ, ಪಶುಸಂಗೋಪನೆ, ರೇಷ್ಮೆ ಕೃಷಿ ಮತ್ತು ಮೀನುಗಾರಿಕೆಯಲ್ಲಿ ಆಗುತ್ತಿರುವ ತಾಂತ್ರಿಕ ಬೆಳವಣಿಗೆಗಳ ಬಗ್ಗೆ ಮತ್ತು ವಿಶ್ವ ವ್ಯಾಪಾರದ ಬಗ್ಗೆ ಮಾಹಿತಿಯನ್ನು ವಿತರಿಸಲು ಏಕಗವಾಕ್ಷಿ ವ್ಯವಸ್ಥೆಯನ್ನು ಕಲ್ಪಿಸುವುದು.
2. ರಾಜ್ಯದ ಕೃಷಿ ಬೆಳೆಗಾರರಿಗೆ ವಿಶ್ವದ ಇತರೆ ಭಾಗಗಳಲ್ಲಿ ಸಂಪರ್ಕ ಬೆಳೆಸುವುದಕ್ಕೆ ಅವಕಾಶ ಕಲ್ಪಿಸುವುದು.
3. ಉತ್ಪಾದಕರು ಮತ್ತು ಗ್ರಾಹಕರ ನಡುವೆ ಮಾಹಿತಿ ಮತ್ತು ಬೇಡಿಕೆಗಳ ಬಗ್ಗೆ ವಿಚಾರವಿನಿಮಯ ಮಾಡಿಕೊಳ್ಳಲು ಅಗತ್ಯವಿರುವ ಸೌಕರ್ಯಗಳನ್ನು ಅಂತರರಾಷ್ಟ್ರೀಯ ಗುಣಮಟ್ಟವನ್ನು ಆಧಾರಿಸಿ ಕಲ್ಪಿಸುವುದು.
4. ನೈಸರ್ಗಿಕ ಸಂಪನ್ಮೂಲ ಸಂರಕ್ಷಿಸುವುದಕ್ಕೆ ಒತ್ತು ನೀಡುತ್ತಾ ಕೃಷಿ ಕ್ಷೇತ್ರದಲ್ಲಿ ಉತ್ಪಾದನೆ ಮತ್ತು ಉತ್ಪಾದನೆಯನ್ನು ಅಭಿವೃದ್ಧಿಪಡಿಸಲು ಕಲಿಕೆ ಮಾದರಿಗಳನ್ನು (Learning Model) ರೂಪಿಸುವುದು.
5. ಉತ್ಪಾದಕರು ಮತ್ತು ಮಾರಾಟಗಾರರ ಹಿತದೃಷ್ಟಿಯಿಂದ ಅಂತರರಾಷ್ಟ್ರೀಯ ವಹಿವಾಟು ಪ್ರದರ್ಶನಗಳನ್ನು (International trade exhibition) ನಡೆಸಲು ಅತ್ಯುತ್ತಮ ಸೌಕರ್ಯಗಳನ್ನು (State of Art facilities) ಕಲ್ಪಿಸುವುದು.
6. ಕೃಷಿಕರು ಮತ್ತು ವ್ಯಾಪಾರಿಗಳು ವ್ಯವಹಾರಿಸುವುದಕ್ಕೆ ಅಗತ್ಯವಿರುವ ಮಾಹಿತಿಯನ್ನು ಸಂಗ್ರಹಿಸಿ ವಹಿವಾಟು ಕೈಗೊಳ್ಳಲು ಕೇಂದ್ರ ಸ್ಥಾನವೊಂದನ್ನು ಅಭಿವೃದ್ಧಿಪಡಿಸುವುದು.

7. ಉತ್ಪಾದಕರು ಉತ್ತಮ ವ್ಯವಸಾಯ ಪದ್ಧತಿಗಳನ್ನು (Good Agricultural Practices) ಕೈಗೊಳ್ಳಲು ಮತ್ತು ವ್ಯಾಪಾರಿಗಳು ನ್ಯಾಯಯುತ ವಹಿವಾಟು ಚಟುವಟಿಕೆಗಳನ್ನು ಕೈಗೊಳ್ಳಲು (Fair Trade Practices) ಅಗತ್ಯವಿರುವ ತರಬೇತಿ ಮತ್ತು ಸಾಮರ್ಥ್ಯಗಳನ್ನು ವೃದ್ಧಿಸುವ ಕೇಂದ್ರವನ್ನಾಗಿ ಅಭಿವೃದ್ಧಿಪಡಿಸುವುದು.

**ಯೋಜನೆಯ ಸ್ಥಳ:**

ಪ್ರಸ್ತಾಪಿತ ಅಂತರರಾಷ್ಟ್ರೀಯ ಕೃಷಿ ವ್ಯಾಪಾರ ಮೇಳದ ಕೇಂದ್ರವನ್ನು "Green Life International Poojenahalli" ಎಂಬ ಬ್ರಾಂಡ್ ಹೆಸರಿನಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ಸಮೀಪ ಸ್ಥಾಪನೆಗೊಳ್ಳುತ್ತಿರುವ ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ಹತ್ತಿರವಿರುವ ಪೂಜೇನಹಳ್ಳಿಯ ತೋಟಗಾರಿಕೆ ಕ್ಷೇತ್ರಕ್ಕೆ ಸೇರಿದ 50 ಹೆಕ್ಟೇರ್ ಪ್ರದೇಶದಲ್ಲಿ ಅಭಿವೃದ್ಧಿ ಪಡಿಸಲಾಗುವುದು.

**ಯೋಜನೆಯ ಕಾಂಪೋನೆಂಟ್‌ಗಳು:**

ಯೋಜನೆಯ ಪ್ರಮುಖ ಕಾಂಪೋನೆಂಟ್‌ಗಳು ಕೆಳಕಂಡಂತಿರುತ್ತವೆ:

1. **ಕ್ರಾಪ್ ಮ್ಯೂಸಿಯಂ :** ಸಮಗ್ರ ಕೃಷಿ ಪದ್ಧತಿಗಳನ್ನು ಗಮನದಲ್ಲಿರಿಸಿಕೊಂಡು ತೋಟಗಾರಿಕೆ, ಕೃಷಿ, ಪಶುಸಂಗೋಪನೆ, ರೇಷ್ಮೆ ಮತ್ತು ಮೀನುಗಾರಿಕೆ ಚಟುವಟಿಕೆಗಳಿಗೆ ಸಂಬಂಧಿಸಿದ ವಾಣಿಜ್ಯ ಅಥವಾ ಚಾರಿತ್ರಿಕ (heritage) ಬೆಳೆಗಳ ಜೈವಿಕ ಅಥವಾ ಮಾದರಿಗಳನುಳ್ಳ ಮ್ಯೂಸಿಯಂ ನಿರ್ಮಿಸಲಾಗುವುದು. ಸ್ಥಳೀಯ ಮತ್ತು ನೈಸರ್ಗಿಕ ಸಂಪನ್ಮೂಲಗಳ ಸಂರಕ್ಷಣೆಗೆ ಒತ್ತು ನೀಡಲಾಗುವುದು. ಈ ಕ್ಷೇತ್ರದಲ್ಲಿ ಹಾಲಿ ಇರುವ ಮಾವು ಮತ್ತು ಹರ್ಬಲ್ ಸಸ್ಯಗಳನ್ನು ಸಂಪೂರ್ಣವಾಗಿ ಸಂರಕ್ಷಿಸಲಾಗುವುದು.
2. **ಮಾಹಿತಿ ಡೆಸ್ಕ್ :** ಕೇಂದ್ರದ ಪ್ರವೇಶದ್ವಾರದ ಬಳಿ ಕಂಪ್ಯೂಟರ್ ಮಾಹಿತಿ ಡೆಸ್ಕ್ ಸ್ಥಾಪಿಸಲಾಗುವುದು ಮತ್ತು ವಿವಿಧ ವಿಭಾಗಗಳ ಹಾಗೂ ಅವುಗಳಲ್ಲಿ ಕೈಗೊಳ್ಳಲಾಗುವ ಚಟುವಟಿಕೆಗಳ ಬಗ್ಗೆ ಮಾಹಿತಿ ಒದಗಿಸಲಾಗುವುದು.
3. **ತಾಂತ್ರಿಕ ಕೋಶ :** ಉತ್ಪಾದಕರು ಮತ್ತು ವ್ಯಾಪಾರಿಗಳಿಗೆ ಮಾಹಿತಿಯನ್ನು ನೀಡುವ ಉದ್ದೇಶದಿಂದ ತೋಟಗಾರಿಕೆ, ಕೃಷಿ, ಪಶುಸಂಗೋಪನೆ, ರೇಷ್ಮೆ, ಮೀನುಗಾರಿಕೆ ಮತ್ತು ಅಂತರರಾಷ್ಟ್ರೀಯ ವಹಿವಾಟಿನಲ್ಲಿ ಪರಿಣಿತರನ್ನುಳ್ಳ ತಾಂತ್ರಿಕ ಕೋಶವನ್ನು ಸ್ಥಾಪಿಸಲಾಗುವುದು. ಅವರುಗಳನ್ನು ಸಂಬಂಧಪಟ್ಟ ಇಲಾಖೆಗಳಿಂದ ನಿಯೋಜನೆ ಮೇರೆಗೆ ಅಥವಾ ಪರಿಣಿತರ ಗುಂಪುಗಳಿಂದ ಹೊರಗುತ್ತಿಗೆ ಆಧಾರದ ಮೇಲೆ ಒಗ್ಗೂಡಿಸಲಾಗುವುದು. ಅಪೇಡಾ, ರಾಷ್ಟ್ರೀಯ ತೋಟಗಾರಿಕೆ ಮಂಡಳಿ, ಕೆಪೆಕ್, ಬೀಜೋದ್ಯಮಿಗಳು, ಇತರೆ ಪ್ರತಿನಿಧಿಗಳು ಕೇಂದ್ರಕ್ಕೆ ಭೇಟಿ ನೀಡುವ ರೈತರು ಮತ್ತು ಉದ್ಯಮಿಗಳಿಗೆ ದಿನನಿತ್ಯ ಮಾಹಿತಿಯನ್ನು ನೀಡಲಿದ್ದಾರೆ. ಉತ್ಪಾದನೆ, ಸಂಸ್ಕರಣೆ, ಪ್ಯಾಕಿಂಗ್‌ಗೆ ಸಂಬಂಧಿಸಿದ ಎಲ್ಲಾ ಮಾಹಿತಿಗಳನ್ನು ಭೇಟಿ ನೀಡುವ ಉತ್ಪಾದಕರಿಗೆ ದಿನನಿತ್ಯ ಒದಗಿಸಲು ತಾಂತ್ರಿಕ ಕೋಶವು ಮಾಹಿತಿಯನ್ನು ಸಂಗ್ರಹಿಸುವ ಮತ್ತು ತಲುಪಿಸುವ ಏಕಗವಾಕ್ಷಿಯಾಗಿ ಕೆಲಸ ನಿರ್ವಹಿಸಲಿದೆ.
4. **ವ್ಯಾಪಾರ ಕೇಂದ್ರ :** ಈ ಚಟುವಟಿಕೆಯು ಕೇಂದ್ರದ ಪ್ರಮುಖ ಕಾರ್ಯಕ್ರಮಗಳಲ್ಲಿ ಒಂದಾಗಿದೆ. ಈ ಕೋಶದಲ್ಲಿ ತೀವ್ರವೇಗದ ಇಂಟರ್‌ನೆಟ್ ಸೌಲಭ್ಯ, ದೂರವಾಣಿ, ಫ್ಯಾಕ್ಸ್ ಸೌಲಭ್ಯ ಮತ್ತು ಈ–ಗ್ರಂಥಾಲಯಗಳ ಮೂಲಕ ಸ್ಥಳದಲ್ಲೇ ವಹಿವಾಟು ಕುದುರಿಸುವ ಸೌಲಭ್ಯಗಳನ್ನು ಕಲ್ಪಿಸಲಾಗುವುದು. ಈ ಕೋಶಕ್ಕೆ ವ್ಯಾಖ್ಯಾನಿಸುವ (interpretation) ಮತ್ತು ಸಚಿವಾಲಯ ಸೇವೆಗಳನ್ನು (secretarial service) ಹೊರಗುತ್ತಿಗೆ (out sourcing) ಆಧಾರದ ಮೇಲೆ ಒದಗಿಸಲಾಗುವುದು. ವಿಶ್ವವ್ಯಾಪಾರದ ಮಾಹಿತಿಯನ್ನು ತಹಲ್ ಮಾಡಲು (updating) ಮತ್ತು online ಮೂಲಕ ಪ್ರಚಾರ ಮಾಡುವ ಜವಾಬ್ದಾರಿಯನ್ನು ಈ ಕೋಶ ನಿರ್ವಹಿಸಲಿದೆ.
5. **ಪ್ರದರ್ಶನ ಮಳಿಗೆಗಳು (Pavilions):**
   (a) **ಖಾಯಂ ಮಳಿಗೆಗಳು :** ಪ್ರದರ್ಶನ ಮಳಿಗೆಗಳಲ್ಲಿ ಎರಡು ವಿಭಾಗಗಳು ಇರುತ್ತವೆ. ಒಂದರಲ್ಲಿ ವಿವಿಧ ವಲಯಗಳ ಉತ್ಪಾದಕರು ಉತ್ಪನ್ನಗಳ ಉತ್ಪಾದಕತೆ ಮತ್ತು ಗುಣಮಟ್ಟವನ್ನು ವೃದ್ಧಿಸಲು ಕೈಗೊಳ್ಳಬೇಕಾದ ತಂತ್ರಜ್ಞಾನ ಮತ್ತು ಆಚರಣೆಗಳನ್ನು ಪ್ರದರ್ಶಿಸಲಾಗುವುದು. ಮತ್ತೊಂದರಲ್ಲಿ ವೈವಿಧ್ಯಮಯ ಸಾಂಸ್ಕೃತಿಕ ಹಿನ್ನೆಲೆಯ, ವಿವಿಧ ಹವಾಮಾನ ವಲಯಗಳಲ್ಲಿ ಉತ್ಪಾದಿಸಬಹುದಾದ ವಿವಿಧ (ಕಚ್ಚಾ / ಸಂಸ್ಕರಿಸಿದ) ಉತ್ಪನ್ನಗಳ ಪ್ರದರ್ಶನವನ್ನು ಮಾಡಲಾಗುವುದು. ಸಾರ್ವಜನಿಕರ ಮತ್ತು ಮಾರಾಟಗಾರರ ತಿಳುವಳಿಕೆಗಾಗಿ ವಿಶೇಷ ಸಾಮಗ್ರಿಗಳನ್ನು ಪ್ರದರ್ಶಿಸಿ ಮಾರಾಟ ಮಾಡಲು ಉದ್ಯಮಿಗಳಿಗೆ ಸಣ್ಣ ಕಿಯಾಸ್ಕ್‌ಗಳನ್ನು ಸಹ ಒದಗಿಸಲಾಗುವುದು.

   (b) **ಋತುವಾಧಾರಿತ ಮಳಿಗೆಗಳು :** ಮುಖ್ಯ ಕೇಂದ್ರಕ್ಕೆ ಹೊಂದಿಕೊಂಡಂತೆ ಹಿಂಗಾರು ಮತ್ತು ಮುಂಗಾರು ವಾಣಿಜ್ಯ ಮೇಳಗಳನ್ನು ನಡೆಸಲು ತಾತ್ಕಾಲಿಕ ಮಳಿಗೆಗಳನ್ನು ನಿರ್ಮಿಸುವ ಸಲುವಾಗಿ ಖಾಲಿ ಸ್ಥಳಗಳನ್ನು ಅಭಿವೃದ್ಧಿಪಡಿಸಲಾಗುವುದು. ಮುಂದಿನ 20 ವರ್ಷಗಳ ಅಗತ್ಯಗಳನ್ನು ಗಮನದಲ್ಲಿಟ್ಟುಕೊಂಡು

ಮೂಲಸೌಕರ್ಯಗಳಾದ ಬಸಿಗಾಲುವೆ, ವಿದ್ಯುತ್, ಚರಂಡಿ ಮತ್ತು ವಾಹನ ನಿಲುಗಡೆ ಸೌಕರ್ಯಗಳನ್ನು ಕಲ್ಪಿಸಲಾಗುವುದು.

6. **ಸಮ್ಮೇಳನ/ ತರಬೇತಿ ಕೇಂದ್ರಗಳು :** ಆಧುನಿಕ ದೃಶ್ಯ-ಶ್ರವಣ ಸೌಕರ್ಯಗಳನ್ನುಳ್ಳ 3 ವಿವಿಧೋದ್ದೇಶ ಸಮ್ಮೇಳನ ಸಭಾಂಗಣಗಳನ್ನು ತಲಾ 500, 200 ಮತ್ತು 100 ಜನರಿಗೆ ಸ್ಥಳಾವಕಾಶ ಸಾಮರ್ಥ್ಯವನ್ನು ಅಳವಡಿಸಿ ನಿರ್ಮಿಸಲಾಗುವುದು. ಈ ಸೌಲಭ್ಯವನ್ನು ಸಮ್ಮೇಳನ, ಸೆಮಿನಾರ್, ಕಾರ್ಯಗಾರ ಮತ್ತು ಚರ್ಚಾಕೂಟಗಳನ್ನು ನಡೆಸಲು ವಿನಿಯೋಗಿಸಲಾಗುವುದು. ಇದರ ಜೊತೆಗೆ 50 ಜನರಿಗೆ ಆಸನ ವ್ಯವಸ್ಥೆಯುಳ್ಳ ಸಭಾ ಕೊಠಡಿಯನ್ನು ನಿರ್ಮಿಸಲಾಗುವುದು. ಈ ಎಲ್ಲಾ ಸಮ್ಮೇಳನ ಕೇಂದ್ರಗಳಿಗೆ ಮೊಗಸಾಲೆ ಮತ್ತು ಪ್ಲಾನಿಟರಿ ಸೌಕರ್ಯಗಳನ್ನು ಕಲ್ಪಿಸುವುದು.
7. **ಅಂತರರಾಷ್ಟ್ರೀಯ ಅತಿಥಿಗೃಹ :** ಸಮ್ಮೇಳನಗಳು, ವ್ಯಾಪಾರ ಪ್ರದರ್ಶನಗಳು, ಇತ್ಯಾದಿ ಕಾರ್ಯಕ್ರಮಗಳಿಗೆ ಹಾಜರಾಗುವ ಅಂತರರಾಷ್ಟ್ರೀಯ ಪ್ರತಿನಿಧಿಗಳ ವಾಸ್ತವ್ಯಕ್ಕೆ ಈ ಕೇಂದ್ರದಲ್ಲಿ 100 ಕೊಠಡಿಗಳನ್ನುಳ್ಳ ಮತ್ತು ಅತ್ಯುತ್ತಮ ಸೌಕರ್ಯಗಳನ್ನುಳ್ಳ ಅತಿಥಿಗೃಹ ನಿರ್ಮಿಸಲಾಗುವುದು. ಈ ಅತಿಥಿಗೃಹಗಳನ್ನು ಬಾಡಿಗೆ ಆಧಾರದ ಮೇಲೆ ನೀಡಲಾಗುವುದು. ಇದೇ ರೀತಿ ಕಡಿಮೆ ಬಾಡಿಗೆಯ 50 ಕೊಠಡಿಗಳು ಮತ್ತು ಡಾಮಿಟರಿಗಳನ್ನುಳ್ಳ ಮತ್ತೊಂದು ಬ್ಲಾಕ್ ನಿರ್ಮಾಣ ಮಾಡಲಾಗುವುದು. ಈ ಎರಡೂ ಬ್ಲಾಕ್‌ಗಳಿಗೆ ಅಡಿಗೆಮನೆ ಮತ್ತು ಊಟದ ಹಾಲ್‌ಗಳ ವ್ಯವಸ್ಥೆ ಕಲ್ಪಿಸಲಾಗುವುದು.

**ನಿರ್ವಹಣೆ:**

ಕೃಷಿ ವ್ಯಾಪಾರ ಮೇಳ ಕೇಂದ್ರದ ಸ್ಥಾಪನೆ ಮತ್ತು ನಿರ್ವಹಣೆಗಾಗಿ ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರ ಅಧ್ಯಕ್ಷತೆಯಲ್ಲಿ ಉನ್ನತಾಧಿಕಾರಯುಕ್ತ ಸಮಿತಿಯನ್ನು (Empowered Committee) ಮತ್ತು ತೋಟಗಾರಿಕೆ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಕಾರ್ಯಕಾರಿ ಪ್ರಾಧಿಕಾರವನ್ನು ರಚಿಸಲಾಗಿದೆ.

**1. ಉನ್ನತಾಧಿಕಾರಯುಕ್ತ ಸಮಿತಿ:**

**a) ರಚನೆ:**

| | | |
|---|---|---|
| 1 | ಅಪರ ಮುಖ್ಯ ಕಾರ್ಯದರ್ಶಿ ಮತ್ತು ಅಭಿವೃದ್ಧಿ ಆಯುಕ್ತರು | ಅಧ್ಯಕ್ಷರು |
| 2 | ಪ್ರಧಾನ ಕಾರ್ಯದರ್ಶಿ / ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ | ಉಪಾಧ್ಯಕ್ಷರು |
| 3 | ಪ್ರಧಾನ ಕಾರ್ಯದರ್ಶಿ, ಆಹಾರ ಸಂಸ್ಕರಣೆ ಮತ್ತು ಕೊಯ್ಲು ನಂತರ ನಿರ್ವಹಣೆ | ಸದಸ್ಯರು |
| 4 | ಪ್ರಧಾನ ಕಾರ್ಯದರ್ಶಿ, ಆರ್ಥಿಕ ಇಲಾಖೆ | ಸದಸ್ಯರು |
| 5 | ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ಸದಸ್ಯರು |
| 6 | ಪ್ರಧಾನ ಕಾರ್ಯದರ್ಶಿ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ | ಸದಸ್ಯರು |
| 7 | ಪ್ರಧಾನ ಕಾರ್ಯದರ್ಶಿ, ಪರಿಸರ ಮತ್ತು ಅರಣ್ಯ ಇಲಾಖೆ | ಸದಸ್ಯರು |
| 8 | ವಿಶೇಷಾಧಿಕಾರಿ / ಉಪಕುಲಪತಿಗಳು, ತೋಟಗಾರಿಕೆ ವಿಶ್ವವಿದ್ಯಾಲಯ | ಸದಸ್ಯರು |
| 9 | ಕಾರ್ಯದರ್ಶಿ, ಮಾಹಿತಿ ತಂತ್ರಜ್ಞಾನ ಮತ್ತು ಜೀವತಂತ್ರಜ್ಞಾನ ಇಲಾಖೆ | ಸದಸ್ಯರು |
| 10 | ಆಯುಕ್ತರು, ಕೃಷಿ ಇಲಾಖೆ, ಶೇಷಾದ್ರಿ ರಸ್ತೆ, ಬೆಂಗಳೂರು | ಸದಸ್ಯರು |
| 11 & 12 | ಕೃಷಿ ಉತ್ಪಾದಕರ ಇಬ್ಬರು ಪ್ರತಿನಿಧಿಗಳು (ಕೃಷಿ, ತೋಟಗಾರಿಕೆ, ಪಶುಸಂಗೋಪನೆ, ಮೀನುಗಾರಿಕೆ ಮತ್ತು ರೇಷ್ಮೆ) | ಸದಸ್ಯರು |
| 13 & 14 | ಕೃಷಿ ಆಧಾರಿತ ಉದ್ಯಮದ ಇಬ್ಬರು ಪ್ರತಿನಿಧಿಗಳು (ಕೃಷಿ, ತೋಟಗಾರಿಕೆ, ಪಶುಸಂಗೋಪನೆ, ಮೀನುಗಾರಿಕೆ ಮತ್ತು ರೇಷ್ಮೆ) | ಸದಸ್ಯರು |
| 15 | ತೋಟಗಾರಿಕೆ ನಿರ್ದೇಶಕರು | ಸದಸ್ಯ-ಕಾರ್ಯದರ್ಶಿ |

**b) ಕಾರ್ಯಭಾರಗಳು :**

1) ಅಂತರರಾಷ್ಟ್ರೀಯ ವ್ಯಾಪಾರ ಮೇಳ ಕೇಂದ್ರದ ಸ್ಥಾಪನೆ ಮತ್ತು ಕಾರ್ಯನಿರ್ವಹಣೆ ಕುರಿತಂತೆ ನೀತಿ ಮತ್ತು ಮಾರ್ಗಸೂಚಿಗಳನ್ನು ರೂಪಿಸುವುದು.
2) ಈ ಕೇಂದ್ರದ ಸ್ಥಾಪನೆ ಮತ್ತು ಕಾರ್ಯನಿರ್ವಹಣೆಯಲ್ಲಿ ಭಾಗವಹಿಸುವ ವಿವಿಧ ವಲಯಗಳ/ ಏಜನ್ಸಿಗಳ ನಡುವೆ ಸಮನ್ವಯ ಮಾಡುವುದು.
3) ವಾಣಿಜ್ಯ ಕೇಂದ್ರಕ್ಕೆ ಸಂಬಂಧಪಟ್ಟಂತೆ ಯಾವುದೇ ಶಾಸನಾತ್ಮಕ ಕ್ರಮಗಳನ್ನು ರೂಪಿಸುವುದು.
4) ಕೇಂದ್ರದ ಸ್ಥಾಪನೆ ಮತ್ತು ಕಾರ್ಯನಿರ್ವಹಣೆಗೆ ಪ್ರಾಧಿಕಾರಕ್ಕೆ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡುವುದು.

5) ಕೇಂದ್ರದ ಸ್ಥಾಪನೆ ಮತ್ತು ಕಾರ್ಯನಿರ್ವಹಣೆ ಕುರಿತಂತೆ ಪ್ರಗತಿಯನ್ನು ಕಾಲಾನುಕಾಲಕ್ಕೆ ಪರಿಶೀಲಿಸುವುದು.
6) ಪ್ರತಿ 3 ತಿಂಗಳಿಗೊಮ್ಮೆ ಸಮಿತಿ ಸಭೆ ಸೇರುವುದು.
7) ಕೇಂದ್ರದ ಸ್ಥಾಪನೆ ಮತ್ತು ಕಾರ್ಯನಿರ್ವಹಣೆ ಕುರಿತಂತೆ ಇತರೆ ಯಾವುದೇ ವಿಷಯದ ಬಗ್ಗೆ ಕ್ರಮ ವಹಿಸುವುದು.
8) ಯೋಜನೆಯು ಸ್ಥಾಪನೆಗೊಂಡು ಕಾರ್ಯನಿರ್ವಹಣೆ ಆರಂಭಿಸಿದ ನಂತರ ಈ ಸಮಿತಿಯು ರದ್ದುಗೊಳ್ಳಲಿದೆ. ಕೇಂದ್ರದ ಕಾರ್ಯನಿರ್ವಹಣೆಗೆ ಅಗತ್ಯವಿರುವ ಸಾಂಸ್ಥಿಕ ವ್ಯವಸ್ಥೆಯನ್ನು ಕಾರ್ಯಕಾರಿ ಪ್ರಾಧಿಕಾರವು ಮಾಡಿಕೊಳ್ಳುವುದು.

2. **ಕಾರ್ಯಕಾರಿ ಪ್ರಾಧಿಕಾರ:**

**a)** ರಚನೆ:

| | | |
|---|---|---|
| 1 | ಕಾರ್ಯದರ್ಶಿ, ತೋಟಗಾರಿಕೆ ಇಲಾಖೆ | ಅಧ್ಯಕ್ಷರು |
| 2 | ಆಯುಕ್ತರು, ಕೃಷಿ ಇಲಾಖೆ | ಸದಸ್ಯರು |
| 3 | ತೋಟಗಾರಿಕೆ ನಿರ್ದೇಶಕರು | ಸದಸ್ಯರು |
| 4 | ನಿರ್ದೇಶಕರು, ಪಶುಸಂಗೋಪನೆ ಇಲಾಖೆ | ಸದಸ್ಯರು |
| 5 | ನಿರ್ದೇಶಕರು, ಮೀನುಗಾರಿಕೆ ಇಲಾಖೆ | ಸದಸ್ಯರು |
| 6 | ನಿರ್ದೇಶಕರು, ರೇಷ್ಮೆ ಕೃಷಿ ಇಲಾಖೆ | ಸದಸ್ಯರು |
| 7 | ವ್ಯವಸ್ಥಾಪಕ ನಿರ್ದೇಶಕರು, ಕೆಪೆಕ್ | ಸದಸ್ಯರು |
| 8 | ವ್ಯವಸ್ಥಾಪಕ ನಿರ್ದೇಶಕರು, ಉದ್ಯೋಗಮಿತ್ರ | ಸದಸ್ಯರು |
| 9 & 10 | ಕೃಷಿ ಉತ್ಪಾದಕರ ಇಬ್ಬರು ಪ್ರತಿನಿಧಿಗಳು (ಕೃಷಿ, ತೋಟಗಾರಿಕೆ, ಪಶುಸಂಗೋಪನೆ, ಮೀನುಗಾರಿಕೆ ಮತ್ತು ರೇಷ್ಮೆ) | ಸದಸ್ಯರು |
| 11 & 12 | ಕೃಷಿ ಆಧಾರಿತ ಉದ್ಯಮದ ಇಬ್ಬರು ಪ್ರತಿನಿಧಿಗಳು (ಕೃಷಿ, ತೋಟಗಾರಿಕೆ, ಪಶುಸಂಗೋಪನೆ, ಮೀನುಗಾರಿಕೆ ಮತ್ತು ರೇಷ್ಮೆ) | ಸದಸ್ಯರು |
| 13 | ಪ್ರಾಂಶುಪಾಲರು/ಶಿಕ್ಷಣ ನಿರ್ದೇಶಕರು, ತೋಟಗಾರಿಕೆ ಕಾಲೇಜ್, ಬೀದರ್ | ಸದಸ್ಯರು |
| 14 | ಉಪಕಾರ್ಯದರ್ಶಿಗಳು–1, ಆರ್ಥಿಕ ಇಲಾಖೆ | ಸದಸ್ಯರು |
| 15 | ತೋಟಗಾರಿಕೆ ಜಂಟಿ ನಿರ್ದೇಶಕರು (ಜೀವತಂತ್ರಜ್ಞಾನ) | ಸದಸ್ಯ–ಕಾರ್ಯದರ್ಶಿ |

**b)** ಕಾರ್ಯಭಾರ :

1) ಅಂತರರಾಷ್ಟ್ರೀಯ ಕೃಷಿ ವಾಣಿಜ್ಯ ಮೇಳ ಕೇಂದ್ರದ ಸ್ಥಾಪನೆ ಮತ್ತು ಕಾರ್ಯನಿರ್ವಹಣೆಯಲ್ಲಿ ಸಂಪೂರ್ಣವಾದ ಆಡಳಿತಾತ್ಮಕ ಮತ್ತು ಆರ್ಥಿಕ ಅಧಿಕಾರವನ್ನು ಹೊಂದಲಿದೆ.
2) ಕೇಂದ್ರದ ಸ್ಥಾಪನೆ ಮತ್ತು ಕಾರ್ಯನಿರ್ವಹಣೆಗೆ ಸಂಬಂಧಿಸಿದಂತೆ ಕೈಗೊಳ್ಳಲಾಗುವ ಕಾಮಗಾರಿಗಳಿಗೆ ಮತ್ತು ವೆಚ್ಚಗಳಿಗೆ ಅನುಮೋದನೆ ನೀಡುವುದು.
3) ಕೇಂದ್ರವು ಕೈಗೊಳ್ಳಬೇಕಾಗಿರುವ ಕಾರ್ಯಕ್ರಮಗಳ ಬಗ್ಗೆ ಮಾರ್ಗಸೂಚಿಗಳನ್ನು ರೂಪಿಸುವುದು.
4) ಅಧಿಕಾರಯುಕ್ತ ಸಮಿತಿಯು ಅನುಮೋದನೆಗೆ ನೀತಿ ಮತ್ತು ಮಾರ್ಗಸೂಚಿಗಳನ್ನು ರೂಪಿಸಿ ಸಲ್ಲಿಸುವುದು.
5) ಅಧಿಕಾರಯುಕ್ತ ಸಮಿತಿಯ ಮಾರ್ಗದರ್ಶನ ಪಡೆದು ಕಾರ್ಯನಿರ್ವಹಿಸುವುದು.
6) ವಿವಿಧ ಸಾರ್ವಜನಿಕ ಮತ್ತು ಖಾಸಗಿ ವಲಯಗಳ ಸಂಸ್ಥೆಗಳಿಂದ ಆರ್ಥಿಕ ವಂತಿಗೆಗಳನ್ನು (financial contribution) ರೂಢಿಸಿಕೊಳ್ಳಲಿದೆ. ಕನಿಷ್ಟಪಕ್ಷ 2 ತಿಂಗಳಿಗೊಮ್ಮೆ ಸಭೆ ಸೇರುವುದು.

**c)** ಸಿಬ್ಬಂದಿ :

1) **ಪ್ರಾಜೆಕ್ಟ್ ಅಧಿಕಾರಿ :** ಕೇಂದ್ರದ ಎಲ್ಲಾ ಚಟುವಟಿಕೆಗಳನ್ನು ಸಮನ್ವಯಗೊಳಿಸಲು ಪ್ರಾಜೆಕ್ಟ್ ಅಧಿಕಾರಿಯಾಗಿ ಕೆಲಸ ನಿರ್ವಹಣೆಗೆ ತೋಟಗಾರಿಕೆ ಉಪ ನಿರ್ದೇಶಕರ ಹುದ್ದೆಯನ್ನು ಸೃಜಿಸಲಾಗುವುದು. ಈ ಬಗ್ಗೆ ತೋಟಗಾರಿಕೆ ನಿರ್ದೇಶಕರು ಪ್ರತ್ಯೇಕ ಪ್ರಸ್ತಾವನೆಯನ್ನು ಅದಕ್ಕೆ ತಗಲುವ ವೆಚ್ಚ ಮತ್ತು ಇನ್ನಿತರೆ ವಿವರಗಳನ್ನು ಸಲ್ಲಿಸತಕ್ಕದ್ದು. ಸರ್ಕಾರದ ಪ್ರತ್ಯೇಕ ಆದೇಶದ ನಂತರವೇ ಈ ಹುದ್ದೆ ಸೃಜನೆಗೊಳ್ಳಲಿದೆ.
2) **ಸಹಾಯಕ ಪ್ರಾಜೆಕ್ಟ್ ಅಧಿಕಾರಿ :** ಪೂಜೇನಹಳ್ಳಿಯ ತೋಟಗಾರಿಕೆ ಕ್ಷೇತ್ರದಲ್ಲಿರುವ ಸಹಾಯಕ ತೋಟಗಾರಿಕೆ ನಿರ್ದೇಶಕರನ್ನು re-deployment ಮೂಲಕ ಈ ಹುದ್ದೆಗೆ ನಿಯೋಜಿಸಲಾಗುವುದು.

3) **ಸ್ಥಾನಿಕ ಅಧಿಕಾರಿ (site officer) :** ಪೂಜೇನಹಳ್ಳಿಯ ತೋಟಗಾರಿಕೆ ಕ್ಷೇತ್ರದಲ್ಲಿರುವ ಸಹಾಯಕ ತೋಟಗಾರಿಕೆ ಅಧಿಕಾರಿಯನ್ನು re-deployment ಮೂಲಕ ಈ ಹುದ್ದೆಗೆ ನಿಯೋಜಿಸಲಾಗುವುದು.
4) **ವ್ಯವಸ್ಥಾಪಕ :** ತೋಟಗಾರಿಕೆ ನಿರ್ದೇಶನಾಲಯದಿಂದ ಒಂದು ವ್ಯವಸ್ಥಾಪಕರ ಹುದ್ದೆಯನ್ನು re-deployment ಮಾಡಲಾಗುವುದು.
5) **ಕಂಪ್ಯೂಟರ್ ಸಹಾಯಕರು ಹಾಗೂ ಗುಮಾಸ್ಥರು :** 2 ಕಂಪ್ಯೂಟರ್ ಸಹಾಯಕರು ಹಾಗೂ ಗುಮಾಸ್ಥರ ಸೇವೆಯನ್ನು ಯಾವಾಗ ಅಗತ್ಯವಿರುತ್ತದೆಯೋ ಆಗ ಹೊರಗುತ್ತಿಗೆ ಆಧಾರದ ಮೇಲೆ ಪಡೆದುಕೊಳ್ಳಲಾಗುವುದು.
6) **ವಿಷಯ ಪರಿಣಿತರು :** ಅಗತ್ಯವಿರುವ ಸಂದರ್ಭಗಳಲ್ಲಿ ಕೃಷಿ, ಪಶುಸಂಗೋಪನೆ, ರೇಷ್ಮೆ, ಮೀನುಗಾರಿಕೆ, ಮಾರುಕಟ್ಟೆ, ಅಂತರರಾಷ್ಟ್ರೀಯ ವಹಿವಾಟು, ಇತ್ಯಾದಿಗಳಿಗೆ ಸಂಬಂಧಪಟ್ಟ ಒಬ್ಬ ಪರಿಣಿತರ ಸೇವೆಯನ್ನು ಹೊರಗುತ್ತಿಗೆ ಆಧಾರದ ಮೇಲೆ ಪಡೆದುಕೊಳ್ಳಲಾಗುವುದು.

Re-deploymentಗೆ ಸಂಬಂಧಿಸಿದಂತೆ ತೋಟಗಾರಿಕೆ ನಿರ್ದೇಶಕರೇ ಪ್ರತ್ಯೇಕ ಪ್ರಸ್ತಾವನೆಯನ್ನು ಸಲ್ಲಿಸಿ ಸರ್ಕಾರದ ಅನಮೋದನೆ ಪಡೆಯತಕ್ಕದ್ದು. ಕಾರ್ಯಕಾರಿ ಪ್ರಾಧಿಕಾರವು "Greenlife International, Poojenahally" ಹೆಸರಿನಲ್ಲಿ ಸಂಸ್ಥೆಯನ್ನು ನೋಂದಾಯಿಸಿದ ನಂತರ ವಿವರವಾದ ಪ್ರಾಜೆಕ್ಟ್ ವರದಿ (Detailed Project Report) ತಯಾರಿಸಿ ಸರ್ಕಾರದ ಅನುಮೋದನೆಗೆ ಮತ್ತು ಅನುದಾನ ಬಿಡುಗಡೆಗೆ ಪ್ರಸ್ತಾವನೆಯನ್ನು ತೋಟಗಾರಿಕೆ ನಿರ್ದೇಶಕರು ಸಲ್ಲಿಸತಕ್ಕದ್ದು.

**ಎಸ್. ರಾಜು**
ಪಿ.ಆರ್.1595
ಸರ್ಕಾರದ ಅಧೀನ ಕಾರ್ಯದರ್ಶಿ,
ತೋಟಗಾರಿಕೆ ಇಲಾಖೆ

## COMMERCE & INDUSTRIES SECRETARIAT

**Sub:** Proposal of M/s. TATA Motors Ltd., (TML) to establish manufacturing facilities for the manufacture of luxury buses, small buses and light commercial vehicles (LCVs & VANs) and their parts and components at Belur Industrial Area, Dharwad.

**Ref:** 1. Letter of M/s. TATA Motors Ltd., Dtd 6th March 2007.
2. Proceedings of the meeting held on 29-8-07 under the Chairmanship of the Chief Secretary.

**Preamble:**

M/s. TATA Motors Ltd., (TML) in their letter dtd: 6-3-07 cited at ref (1) has proposed to establish manufacturing facilities for the manufacture of luxury buses, small buses and light commercial vehicles (LCVs & VANs) and their parts and components at Belur Industrial Area, Dharwad and has requested the Government for approval of the proposal.

The salient features of the proposal as indicated by the company are as under:

| Sl. No. | Components | Project I (Buses and their parts and components) | | Project II (LCVs and VANs and their parts and components) | | | Total |
|---|---|---|---|---|---|---|---|
| | | Phase I | Phase II | Phase I | Phase II | Phase III | |
| 1 | Investments* | | | | | | |
| | TATA | 210 | 116 | 873 | 712 | 133 | 2044 |
| | VENDORS | | 90 | | | 600 | 690 |
| | *(Rs. In Crore) | | | | | | **2734** |
| 2 | Vehicles (Nos) | 7,500 to 31,150 | | 38,000 to 1,95,000 | | | **2,26,150** |
| 3 | Employment (Nos) | | | | | | |
| | TATA | 2,360 to 6,775 | | 1,200 to 3,625 | | | 10,400 |
| | VENDORS | 5,750 to 18,500 | | 2,825 to 8,775 | | | 27,275 |
| | | | | | | | **37,675** |

After examining the matter in detail, the Government is pleased to pass the following orderd.

**Order No. CI 563 SPI 2005, Bangalore, Dated 3rd September 2007**

In the circumstances explained above, Government is pleased to approve the project of M/s. TATA Motors Ltd., to establish manufacturing facilities for manufacture of luxury buses, small buses and light commercial vehicles (LCVs & VANs) and their parts and components of Belur Industrial Area,

Dharwad, Karnataka, with an investment of Rs. 2,044 crores or more independently and through their Subsidiaries or Joint Venture Companies, where M/s. TML will have majority shareholding (51% and above) and sanction the following infrastructure facilities, incentives and concessions with certain conditions as follows:

**I. INFRASTRUCTURE FACILITIES:**

**A Land :** M/s. TML is permitted to sub-lease the land in its possession to the extent required to its Subsidiaries / Joint Venture Companies.

KIADB to allot additional undeveloped land of 300 acres in Belur Industrial Area, Dharwad available with KIADB on lease-cum-sale basis to M/s. TML for setting up of a Vendor Park for manufacturing of various parts, components and sub-assemblies at a rate of Rs. 3.50 lakhs per acre and M/s. TML is permitted to sub-lease developed plots as per requirement to their Vendors. The development of the park shall be undertaken by M/s. TATA Motors Ltd and / or its vendors at their cost.

**B. Water :** Supply of need based water for the entire project up to 2,600 Cubic Meters per day at a concessional rate of Rs. 10/Cu.Mtr. for five years without any increase.

**C. Power :** Suply of need based power up to 50 MVA from nearby sub station.

**II. FISCAL INCENTIVES :**

**A. Soft loan against VAT**

Soft loan for a period of 18 years from the date of starting production, for each phase of the project (s) maximum up to 235% on the proposed capital investment with an interest at 1.00% per annum and a moratorium of 10 years, equal to Output Tax on finished products (Gross VAT) collected by the industry in their tax invoice, on the products sold in Karnataka State.

**B. CST**

No exemptions of CST. The company has to pay CST as per rules.

**C. Entry Tax**

Entry Tax Exemption as per New Industrial Policy 2006-11.

**D. Stamp Duty Exemption**

75% exemption from payment of stamp duty and registration charges at concessional rate of Rs.1/- per Rs. 1000/- in respect of documents executed for the additional land of 300 acres allotted by KIADB.

**OTHERS**

**A. Applicability of incentives:**

The above incentives sanctioned to M/s TML to establish facilities for the manufacture of luxury buses, small buses, light commercial vehicles (LCVs & VANs) and their parts and components at Belur Industrial Area, Dharwad will be applicable for investments made either wholly by M/s TML or by its Subsidiary or any Joint Venture Company that M/s TML may form to implement the project in full or in phases provided that M/s. TML holds majority shareholding (51% and above) in such company.

**B. Permission to commence production :**

M/s TML has proposed to start immediate production of Busses and their parts and components due to current market demands.

M/s TML or any of its Subsidiary or Joint Venture Company that M/s TML may form to implement the project is permitted to start immediate production in their existing infrastructure facilities of M/s. TML at Dharwad.

**C. Environment Clearance :**

M/s TML will have to obtain environmental clearance for the project from the Ministry of Environment and Forest, Government of India, as per statutory requirement, after obtaining NoC from the Karnataka State Pollution Control Board. As per the Environmental Protection Act, a public hearing will have to be held before issue of NoC which takes time. However, having regard to the nature of project and the plans of the company to start production at the

earlist possible time, the company or its Subsidiary or any Joint Venture Company is permitted to start preliminary works like site leveling etc., immediately.

**Conditions to be satisfied :**

1. M/s. TATA Motors and or its Subsidiaries or any Joint Venture Companies shall make investments of Rs. 2,044 crore or more on capital assets like land, buildings, plant and machinery, equipments, computers tools, accessories, patterns, moulds, dies etc., and the like by March 2017 and out of this at least Rs. 1,500 crore by March 2013. The C & I Department will verify the investments.
2. The project based on the current status of technology and manufacturing process envisages for direct employment including contract employees working in the Dharwad project of about 10,400 persons by March 2017, of which it is proposed to have at least 80% Kannadigas out of total employees. However, due to unforeseen circumstance like changes in technology & manufacturing process may impact employment potential, the company shall maintain the strength of a minimum of 80% employment to Kannadigas out of total employment.

If the condition regarding minimum capital investment in this project and minimum employment at Dharwad as mentioned above is not achieved, then

a) The project will not be eligible for any incentive.
b) The incentives already availed by the companies shall be returned to the Government with interest at 9.00% p.a.
c) All future incentives and concessions will be discontinued.
d) The unutilized portion of land will be taken back without any compensation.

3.(a) The quantum of soft loan will be limited to maximum of 235% of total investment made during the period stipulated above and as certified by Commerce and Industries Department from time to time.

3.(b) The period of 18 years will be reckoned from the date of commencement of production i.e. Date of First Sale Invoice for each phase of the project (s) with distinct product separately and independently with time schedule as under.

(i) **First phase of the Project I (Buses) –** Date of commercial production i.e., Date of First Sale Invoice or April 2009 whichever is earlier.
(ii) **First phase of the project II (LCVs) –** Date of commercial production i.e. Date of First Sale Invoice or April 2011 whichever is earlier.
(iii) **Last phase of the Project II (VANs) –** Date of commercial production i.e., Date of First Sale Invoice or April 2013 whichever is earlier.

3. (c) The soft loan will carry an interest rate of 1.00% per annum with a moratorium of 10 years i.e. the repayment of laon given in first year would start in the eleventh year.

4. No extension of time will be permitted for claiming unutilized portions of soft loan, if any, after 18 years for each phase of the project (s) with distinct product separately and independently.
5. VAT on sale of vehicles or spare parts of vehicles manufactured elsewhere and sold in Karnataka by M/s TATA motors will not be eligible for the soft loan against VAT.
6. The company has to develop an HRD plan to train Kannadigas and absorb the trained youths in this project. The training should start immediately and period of training should coincide with implementation period, so that the trained youth will get employment on the date of commencement of production.
7. The company shall endeavor to train the local youth to start ancillaries / vendor units in advance so that these units commence production along with the mother unit.
8. TATA group is known for its commitments to social responsibilities. However, they are requested to submit social infrastructure development plan for local area like water supply scheme, education facility, hospitals etc. to Government and implement the same as per action plan.

This order issues with the concurrence of the Finance Department vide note No. ಆಇ 568 ವೆಚ್ಚ–1./2007 ದಿನಾಂಕ: 4–5–2007 and proceedings at ref (3) above.

By order and in the name of the Governor of Karnataka,

**K.R. CHANDRAMMA**

PR. 1619

Desk Officer (Technical Cell)

Commerce & Industries Department.

**FOREST, ECOLOGY AND ENVIRONMENT SECRETARIAT**

**Sub :** Diversion of 22.48 ha. of forest land (revised 14.20 ha.) in Kolar Forest Division for widening and strengthening of NH-7 in favour of the General Manager (Tech) & Project Director, NHAI, Palakkad.

**Read :**
1. Letter No. A5(5) GFL-NH-7. CR-16/05-06 dated: 24-11-2005 of Principal Chief Conservator of Forests, Bangalore.
2. State Government letter No. FEE 189 FLL 2005, dated: 2-1-2006.
3. Letter No.4-KRC.159/2006-BAN/1375, dated: 16-10-2006 of Government of India, Ministry of Environment and Forests, Regional Office, Southern Zone, Bangalore.
4. Letter No.4-KRC 159/2006-BAN/464, dated: 24-7-2007 of Government of India, Ministry of Environment and Forests, Regional Office, Southern Zone, Bangalore.

**Preamble:**

The Principal Chief Conservator of Forests, Bangalore vide his letter dated: 24-11-2005 read at (1) above has submitted the proposal to obtain the approval of Government of India under Section 2 of The Forest (Conservation) Act, 1980 for diversion of 22.48 ha. of forest land along the NH-7 in Kolar Forest Division for widening and strengthening of NH-7 in favour of the General Manager (Tech) and Project Director, NHAI, Palakkad, subject to the certain conditions.

Accordingly the proposal was recommended to Government of India vide State Government letter dated 2-1-2006 read at (2) above.

The Government of India, Ministry of Environment and Forests, Regional office, Bangalore vide their letter dated 16-10-2006 read at (3) above has given its in principle (Stage-I) approval for diversion of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 4-7-2007 furnished the compliance report.

Government of India Ministry of Environment and Forests, Regional Office, South Zone, Bangalore vide their letter dated 24-7-2007 read at (4) above has conveyed its approval (Stage-II) under Section 2 of the Forest (Conservation) Act, 1980 for diversion of 14.20 ha. of forest land in Kolar Forest Division for widening and strengthening of NH-7 in favour of the General Manager (Tech) and Project Director, NHAI, Palakkad, subject to certain conditions.

The proposal has been examined in detail and hence the order.

**Government Order No. FEE 189 FLL 2005, Bangalore, Dated 30th August 2007**

In the circumstances explained in the preamble above, Government is pleased to accord sanction under Section 2 of The Forest (Conservation) Act, 1980 for diversion of 14.20 ha. of forest land in Kolar Forest Division for widening and strengthening of NH-7 in favour of the General Manager (Tech) and Project Director, NHAI, Palakkad, subject to the following conditions.

1. The legal status of the forest land shall remain unchanged.
2. Compensatory afforestation shall be raised over equivalent non-forest land at Sy.No. 80 of Kariganapalya village of Chikkaballapur at the cost of the user agency. Prior permission of Central Government shall be obtained for change of location and schedule of compensatory afforestation, if any
3. Non forest land for compensatory afforestation shall be notified by the State Government as RF/PF under Indian Forest Act, 1927 or the State Forest Act within a period of 6 months and Nodal Officer (Forest Conservation) shall report the compliance within 6 months.

4. Avenue plantation shall be raised on either side of the road at the cost of the user agency.
5. The funds received from the user agency towards NPV, CA under this project shall be transferred to Ad-hoc CAMPA in account No. CA-1582 of Corporation Bank, Block-II, CGO Complex, Phase-I, Lodhi Road, New Delhi-110 003 immediately, under intimation to Government of India.
6. The total forest area utilized for the project shall not exceed 14.20 ha. and it shall be used only for the purpose for which it is diverted. In case the land is not used for the stipulated purpose or when it is no longer needed for the said purpose, then the area will be resumed by the Forest Department.
7. The land shall be utilized only for the purpose for which it is released.
8. If the land is not required for the purpose for which it is granted the same should be resumed back to the Forest Department by the Conservator of Forests under Section 82 of Karnataka Forest Act 1963.
9. The user agency has to pay the lease rent as fixed by the Government at the time of sanction and any subsequent orders in this regard.
10. The lease is granted for 30 years.
11. The Karnataka Forest Act 1963 and Rules 1969 will be applicable for any violation.
12. If the land is not utilized for the purpose within two years, the forest land shall be resumed back by the Conservator of Forests by following the provisions under section 82 of Karnataka Forest Act, 1963.
13. Compensatory afforestation shall be raised at the cost of the user agency over equivalent non-forest land at the rate of prevailing at the time of approval (at present it is Rs. 54,200/- per ha.)
14. Only minimum number of trees shall be cut based on actual requirement of the project and user agency shall pay the extraction and transportation charges of trees as estimated by the Deputy Conservator of Forests from the proposed land it extracted.
15. The user agency has to pay the Net Present Value as per the Government of India's notification dated: 17-1-2004.
16. Any other condition to be stipulated by / Government of India/ State Government / Principal Chief Conservator of Forests, Karnataka in the interest of conservation of forests.
17. The user agency shall abide by all the conditions imposed upon by Government of India, Government of Karnataka and Principal Chief Conservator of Forests.

By order and in the name of the Governor of Karnataka,

PR. 1620

**P.R. KALAVATHI**

Under Secretary to Government,

Forest, Ecology and Environment Department.

**ವಸತಿ ಸಚಿವಾಲಯ**

**ವಿಷಯ :** ರಾಯಚೂರು ಜಿಲ್ಲೆ, ಸಿಂಧನೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ಬದಲಾವಣೆ ಮಾಡುವ ಬಗ್ಗೆ.

**ಉಲ್ಲೇಖ :** 1. ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಎಂ/1998, ದಿನಾಂಕ: 10–4–2000.
2. ಮಾನ್ಯ ಮುಖ್ಯಮಂತ್ರಿಯವರ ಅಪಕ ಕಾರ್ಯದರ್ಶಿ–1, ಇವರ ಪತ್ರ ಸಂಖ್ಯೆ: ಸಿಎಂ/2041/ನಾನಿ/2007, ದಿನಾಂಕ: 30–8–2007.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಉಲ್ಲೇಖ (2)ರಲ್ಲಿ ಪ್ರಸ್ತಾಪಿಸಿರುವಂತೆ ರಾಯಚೂರು ಜಿಲ್ಲೆ, ಸಿಂಧನೂರು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ಬದಲಾವಣೆ ಮಾಡಿ ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 63 ಹೆಚ್‌ಎಎಸ್ 2007, ಬೆಂಗಳೂರು, ದಿನಾಂಕ: 4ನೇ ಸೆಪ್ಟೆಂಬರ್ 2007.**

ಮೇಲ್ಕಂಡ ಸಂದರ್ಭದಲ್ಲಿ ರಾಯಚೂರು ಜಿಲ್ಲೆಯ ಸಿಂಧನೂರು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನು ಬದಲಾವಣೆ ಮಾಡಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| ಕ್ರ.ಸಂ. | ಈ ಮೊದಲು ನಾಮನಿರ್ದೇಶನ ಮಾಡಿದ್ದವರ ಹೆಸರು | ಈಗ ನಾಮನಿರ್ದೇಶನ ಮಾಡಬೇಕಾಗಿರುವವರ ಹೆಸರು |
|---|---|---|
| 1 | ಶ್ರೀ ಲಿಂಗರಾಜ, ಗೋರೆಬಾಳ, ಸಿಂಧನೂರು | ಶ್ರೀ ಅಹ್ಮದ ಪಟೇಲ್ ತಂದೆ ಖಾಜ ಪಟೇಲ್ ಬಡಿಬೇಸ್, ಸಿಂಧನೂರು. |
| 2 | ಶ್ರೀಮತಿ ಹಸೀನ ಗಂಡ ಅಜಮೀರ, ಸಿಂಧನೂರು | ಶ್ರೀಮತಿ ಚಂದ್ರಕಲಾ, ಗಂಡ ಅಮರೇಶ ಕಾಟಿಬೇಸ್, ಸಿಂಧನೂರು. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1621

**ಹೆಚ್. ಹನುಮಂತಯ್ಯ**

ಸರ್ಕಾರದ ಉಪ ಕಾರ್ಯದರ್ಶಿ (ಪ್ರ),

ವಸತಿ ಇಲಾಖೆ

**ವಿಷಯ :** ಗದಗ ಜಿಲ್ಲೆಯ ಶಿರಹಟ್ಟಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/1998, ದಿನಾಂಕ: 10–4–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಗದಗ ಜಿಲ್ಲೆಯ ಶಿರಹಟ್ಟಿ ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 49 ಹೆಚ್‌ಎಎಸ್ 2007, ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2007.**

ಮೇಲ್ಕಂಡ ಸಂದರ್ಭದಲ್ಲಿ ಗದಗ ಜಿಲ್ಲೆಯ ಶಿರಹಟ್ಟಿ ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ದೇವಪ್ಪ, ತಳವಾರ | ಸದಸ್ಯರು |
| 2 | ಶ್ರೀ ಬಸವರಾಜ, ಬಿ. ಹೊಸೂರ | ಸದಸ್ಯರು |
| 3 | ಶ್ರೀಮತಿ ಉಮಲಕ್ಕ ಬಸಲಿಂಗಪ್ಪ, ಕಪ್ಪತ್ತನವರ | ಸದಸ್ಯರು |
| 4 | ಶ್ರೀ ರಾಜೀಸಾಬ್ ರಯೊಸಾಬ್ ಬಳಿಗಾರ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1622

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

**ವಿಷಯ :** ಧಾರವಾಡ ಜಿಲ್ಲೆಯ ಕುಂದಗೋಳ ತಾಲ್ಲೂಕು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರ ನೇಮಕಾತಿ ಬಗ್ಗೆ.

**ಉಲ್ಲೇಖ :** ಸರ್ಕಾರದ ಆದೇಶ ಸಂ.ವಇ/42/ಹೆಚ್‌ಎಂ/1998, ದಿನಾಂಕ: 10–4–2000.

**ಪ್ರಸ್ತಾವನೆ :**

ಸರ್ಕಾರವು ನಗರ ಆಶ್ರಯ ಸಮಿತಿಗಳನ್ನು ಉಲ್ಲೇಖಿತ ಆದೇಶದನ್ವಯ ವಿಧಾನಸಭಾ ಕ್ಷೇತ್ರವಾರು ಪುನರ್ ರಚಿಸಲು ತೀರ್ಮಾನಿಸಿದ್ದು, ಧಾರವಾಡ ಜಿಲ್ಲೆಯ ಕುಂದಗೋಳ ತಾಲ್ಲೂಕು ನಗರ ಆಶ್ರಯ ಸಮಿತಿಗೆ ಅಧಿಕಾರೇತರ ಸದಸ್ಯರನ್ನು ನೇಮಿಸುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಇ 33 ಹೆಚ್‌ಎಎಸ್ 2007, ಬೆಂಗಳೂರು, ದಿನಾಂಕ: 10ನೇ ಆಗಸ್ಟ್ 2007.**

ಮೇಲ್ಕಂಡ ಸಂದರ್ಭದಲ್ಲಿ ಧಾರವಾಡ ಜಿಲ್ಲೆಯ ಕುಂದಗೋಳ ತಾಲ್ಲೂಕು ನಗರ ಆಶ್ರಯ ಸಮಿತಿಗೆ ಈ ಕೆಳಕಂಡವರನ್ನು ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಿ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಆಶ್ರಯ ಸಮಿತಿಯನ್ನು ಪುನರ್ ರಚಿಸಲಾಗಿದೆ.

| | | |
|---|---|---|
| 1 | ಶ್ರೀ ಕೆಂಬಣ್ಣ ಅವಾರಿ, ಸಾ: ಕುಂದಗೋಳ | ಸದಸ್ಯರು |
| 2 | ಶ್ರೀ ದವಲಸಾಬ್, ಹರಕುಣಿ, ಸಾ: ಕುಂದಗೋಳ, ಟಿ.ಬಿ. ಬಡಾವಣೆ, ನಾಗಮಂಗಲ | ಸದಸ್ಯರು |
| 3 | ಶ್ರೀಮತಿ ಗೀತಾ ಮಲ್ಲೇಶಪ್ಪ ಉಪ್ಪಾರ, ಸಾ: ಕುಂದಗೋಳ | ಸದಸ್ಯರು |
| 4 | ಇಮಾಮಹುಸ್ಸೆ ಕಳ್ಳಿಮನಿ, ಸಾ: ಕುಂದಗೋಳ | ಸದಸ್ಯರು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1623

**ರಂಗಮ್ಮ**

ಪೀಠಾಧಿಕಾರಿ–2, ವಸತಿ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ರಾಜ್ಯದಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಕಾರ್ಖಾನೆಗಳ ಸಾಮರ್ಥ್ಯ ವಿಸ್ತರಿಸುವ ಬಗ್ಗೆ ರಾಜ್ಯ ಸರ್ಕಾರದ ಪರಿಷ್ಕೃತ ನೀತಿ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಸಿಐ 260 ಎಸ್‌ಜಿಎಫ್ 2004, ದಿನಾಂಕ: 16–3–2005.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 16–3–2005ರ ಆದೇಶದಲ್ಲಿ ರಾಜ್ಯದಲ್ಲಿ ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ಈ ಕೆಳಕಂಡ ನೀತಿಯನ್ನು ಅಳವಡಿಸಿಕೊಳ್ಳಲಾಗಿತ್ತು.

ಅ) ರಾಜ್ಯದಲ್ಲಿ ಪ್ರಸಕ್ತ ಸಕ್ಕರೆ ಕಾರ್ಖಾನೆಗಳ ಕಬ್ಬಿನ ಅವಶ್ಯಕತೆಯು ಕಬ್ಬಿನ ಲಭ್ಯತೆಯನ್ನು ಮೀರಿರುವುದರಿಂದ, ಯಾವುದೇ ಸಕ್ಕರೆ ಕಾರ್ಖಾನೆಯ ಮುಚ್ಚುವಿಕೆಯಿಂದಾಗಿ ಹೆಚ್ಚುವರಿ ಕಬ್ಬು ಪ್ರದೇಶ ಲಭ್ಯವಾದ ಪ್ರಸಂಗಗಳನ್ನು ಹೊರತುಪಡಿಸಿ, ಇನ್ನಾವುದೇ ಕಾರ್ಖಾನೆಗಳ ಸಾಮರ್ಥ್ಯದ ವಿಸ್ತರಣೆ ಪ್ರಸ್ತಾವನೆಗೆ/ ಹೊಸ ಕಾರ್ಖಾನೆಗಳ ಸ್ಥಾಪನೆಗೆ ಅನುಮತಿ ನೀಡದಿರುವುದು.

ಆ) ಭಾರತ ಸರ್ಕಾರವು ನಿರ್ಧಿಷ್ಟಪಡಿಸಿರುವಂತೆ, ಕಬ್ಬು ಪ್ರದೇಶದ ಲಭ್ಯತೆಯನ್ನು ಆಧರಿಸಿ, ಹಾಲಿ ಕಾರ್ಯನಿರ್ವಹಿಸುತ್ತಿರುವ ಹಾಗೂ ಕಾರ್ಯಾರಂಭ ಮಾಡುವ ಹಂತದಲ್ಲಿರುವ ಸಕ್ಕರೆ ಕಾರ್ಖಾನೆಗಳ ವ್ಯಾಪ್ತಿಯಿಂದ 15 ಕಿ.ಮೀಟರ್ ದೂರದಲ್ಲಿರುವ ಸ್ಥಳವನ್ನು ಹೊಸ ಸಕ್ಕರೆ ಕಾರ್ಖಾನೆಗಳ ಸ್ಥಾಪನೆಗೆ ಆರಿಸಿಕೊಳ್ಳುವುದು.

ಇ) ಆರಿಸಿಕೊಂಡಿರುವ ಸ್ಥಳದಲ್ಲಿ ಸಕ್ಕರೆ ಕಾರ್ಖಾನೆಯನ್ನು ಸ್ಥಾಪಿಸಲು ಒಬ್ಬರಿಗಿಂತ ಹೆಚ್ಚಾಗಿ ಅರ್ಜಿಗಳನ್ನು ಸಲ್ಲಿಸಿದ ಪಕ್ಷದಲ್ಲಿ, ಆದ್ಯತೆಯನ್ನು IEM ಪಡೆದವರಿಗಿಂತ ಜೇಷ್ಠತೆಯಲ್ಲಿ LOI ಪಡೆದವರಿಗೆ ನೀಡುವುದು.

ಈ) ಒಂದು ವೇಳೆ LOI ಪಡೆದವರು ಇಲ್ಲದಿದ್ದ ಪಕ್ಷದಲ್ಲಿ, ಜೇಷ್ಠತೆಯ ಆಧಾರದ ಮೇಲೆ IEM ಪಡೆದವರಿಗೆ ನಿರ್ಧಿಷ್ಟವಾದ ಸ್ಥಳದಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಅವಕಾಶ ನೀಡುವುದು.

2) ಆದರೆ, ಕಳೆದ ಸಾಲಿನಲ್ಲಿ ರಾಜ್ಯದಲ್ಲಿ ಉತ್ತಮ ಮಳೆಯಾಗಿದ್ದರಿಂದ ಕಬ್ಬಿನ ಉತ್ಪಾದನೆ ಹೆಚ್ಚಾಗಿದ್ದು, ಪ್ರಸಕ್ತ ವರ್ಷ ಹಾಗೂ ಮುಂದಿನ ವರ್ಷಗಳಲ್ಲೂ ಸಹಾ ಕಬ್ಬಿನ ಉತ್ಪಾದನೆ ಹೆಚ್ಚಾಗುವ ಸಂಭವವಿದೆ. ಇದರಿಂದಾಗಿ ಅನೇಕ ಉದ್ದಿಮೆದಾರರು ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಮುಂದೆ ಬಂದಿದ್ದು, ಈ ಹೊಸ ಕಾರ್ಖಾನೆಗಳ ಸ್ಥಾಪನೆಗೆ ದಿನಾಂಕ: 16–3–2005ರ ಸರ್ಕಾರಿ ಆದೇಶದಲ್ಲಿನ ನಿಬಂಧನೆಗಳು ಅಡ್ಡಿಯಾಗಿದ್ದ ಕಾರಣ ಇನ್ನು ಮುಂದೆ ಹೊಸ ಸಕ್ಕರೆ ಕಾರ್ಖಾನೆಗಳ ಸ್ಥಾಪನೆ ಮತ್ತು ಸಾಮರ್ಥ್ಯ ವಿಸ್ತರಣೆ ಪ್ರಸ್ತಾವನೆಗಳನ್ನು ಹೊಸ ದೃಷ್ಟಿಕೋನದಿಂದ ನೋಡುವ ಅವಶ್ಯಕತೆಯನ್ನು ಮನಗಂಡು ದಿನಾಂಕ 16–3–2005ರ ಸರ್ಕಾರಿ ಆದೇಶದಲ್ಲಿನ ಕೆಲವು ನಿಬಂಧನೆಗಳನ್ನು ರದ್ದುಪಡಿಸಿ ಈ ಕೆಳಕಂಡಂತೆ ಸರ್ಕಾರದ ಸಕ್ಕರೆ ನೀತಿಯನ್ನು ಅಳವಡಿಸಿಕೊಳ್ಳಲು ನಿರ್ಧರಿಸಲಾಗಿದೆ.

1. ಹಾಲಿ ಇರುವ ಸಕ್ಕರೆ ಕಾರ್ಖಾನೆಯ ಹಾಗೂ ಈಗಾಗಲೇ ಮಂಜೂರಾತಿಯನ್ನು ಪಡೆದು ಹೊಸದಾಗಿ ಸ್ಥಾಪಿಸಲು ಉದ್ದೇಶಿಸಿರುವ ಸಕ್ಕರೆ ಕಾರ್ಖಾನೆಯ 15 ಕಿ.ಮೀ. ಸುತ್ತಳತೆಯೊಳಗಡೆ ಯಾವುದೇ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಅನುಮತಿ ನೀಡದಿರುವುದು.
2. ಒಂದು ನಿರ್ಧಿಷ್ಟ ಪ್ರದೇಶದಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಒಂದಕ್ಕಿಂತ ಹೆಚ್ಚು ಅರ್ಜಿಗಳು ಬಂದಿದ್ದಲ್ಲಿ, ಐ.ಇ.ಎಂ. ಪಡೆದ ದಿನಾಂಕವನ್ನು ಗಣನೆಗೆ ತೆಗೆದುಕೊಳ್ಳುವುದು (ಆದ್ಯತೆ)
3. ಹೊಸ ಕಾರ್ಖಾನೆಗಳಿಗೆ ಕಬ್ಬಿನ ಮೀಸಲು ಕ್ಷೇತ್ರವನ್ನು 15 ಕಿ.ಮೀ. ಅಂತರದೊಳಗೆ ಹಂಚಿಕೆ ಮಾಡತಕ್ಕದ್ದು. ಒಂದು ವೇಳೆ 15 ಕಿ.ಮೀ. ಒಳಗಡೆ ಸಾಕಷ್ಟು ಕಬ್ಬು ದೊರೆಯದೆ ಇರುವಂಥ ಸಕಾರಣಗಳಿದ್ದಲ್ಲಿ, 15 ಕಿ.ಮೀ. ವ್ಯಾಪ್ತಿಯ ಹೊರಗಡೆಯ ಕಬ್ಬಿನ ಮೀಸಲು ಕ್ಷೇತ್ರವನ್ನು ಹಂಚಿಕೆ ಮಾಡಬಹುದು. ಆದರೆ ಈ ರೀತಿ ಹಂಚಿಕೆ ಮಾಡಲಾದ ಪ್ರದೇಶವು ಹಾಲಿ ಇರುವ ಸಕ್ಕರೆ ಕಾರ್ಖಾನೆಗಳ 15 ಕಿ.ಮೀ. ವ್ಯಾಪ್ತಿಯ ಹೊರಗಡೆ ಇರತಕ್ಕದ್ದು.
4. ಹಾಲಿ ಇರುವ ಕಾರ್ಖಾನೆಗಳ ವಿಸ್ತರಣೆ ಪ್ರಸ್ತಾವನೆಯನ್ನು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಪರಿಗಣಿಸುವುದು:
   a. ಸಂಬಂಧಪಟ್ಟ ಕಾರ್ಖಾನೆಗೆ ಹಂಚಿಕೆ ಮಾಡಲಾದ ಪ್ರದೇಶಗಳಲ್ಲಿ ಸಾಕಷ್ಟು ಕಬ್ಬಿನ ಲಭ್ಯತೆ ಇರಬೇಕು ಮತ್ತು
   b. ಅಕ್ಕಪಕ್ಕದ ಕಾರ್ಖಾನೆಗಳಿಗೆ ಅಗತ್ಯವಿರುವ ಕಬ್ಬಿಗೆ ಯಾವುದೇ ಕೊರತೆಯಾಗದಂತಿರಬೇಕು.
   c. ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಕಾರ್ಖಾನೆಗಳ ಸಾಮರ್ಥ್ಯವನ್ನು ಹಾಲಿ ಹಂಚಿಕೆ ಮಾಡಿರುವ ಕಬ್ಬಿನ ಕ್ಷೇತ್ರಗಳ ಪರಿಮಿತಿಯೊಳಗೆ ವಿಸ್ತರಣೆ ಮಾಡುವ ಪ್ರಸ್ತಾವನೆಗಳಿಗೆ ಸಚಿವರ ಅನುಮೋದನೆಯೊಂದಿಗೆ ಅನುಮತಿ ನೀಡಬಹುದು.

5. 15 ಕಿ.ಮೀ. ಅಂತರದೊಳಗೆ ಯಾವುದೇ ಸಕ್ಕರೆ ಕಾರ್ಖಾನೆಗಳಿರದಿದ್ದಲ್ಲಿ ಮತ್ತು ಪ್ರಸ್ತುತ ಇರುವ ಕಾರ್ಖಾನೆಗಳಿಗೆ ಹಂಚಿಕೆ ಮಾಡಿರುವ ಹಳ್ಳಿಗಳನ್ನು ಹೊಸ ಕಾರ್ಖಾನೆಗೆ ಹಂಚಿಕೆ ಮಾಡದಿದ್ದಲ್ಲಿ, ಅಂಥ ಹೊಸ ಸಕ್ಕರೆ ಸ್ಥಾಪನೆ ಪ್ರಸ್ತಾವನೆಗಳನ್ನು ಸಚಿವರ ಅನುಮೋದನೆಯೊಂದಿಗೆ ಅನುಮತಿ ನೀಡುವುದು.
6. ಪ್ರಸಕ್ತ ಇರುವ ಕಾರ್ಖಾನೆಗೆ ಹಂಚಿಕೆ ಮಾಡಿರುವ ಹಳ್ಳಿಗಳನ್ನು ಹೊಸ ಕಾರ್ಖಾನೆಗೆ ಹಂಚಿಕೆ ಮಾಡಲು ಉದ್ದೇಶಿಸಿದಲ್ಲಿ ಅಂಥ ಪ್ರಸ್ತಾವನೆಗಳ ಬಗ್ಗೆ ನಿರ್ಣಯ ತೆಗೆದುಕೊಳ್ಳಲು ಸಚಿವ ಸಂಪುಟದ ಮುಂದೆ ಮಂಡಿಸುವುದು.
7. ನಿರ್ಧಿಷ್ಟ ಪ್ರದೇಶ / ಗ್ರಾಮದಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಒಂದಕ್ಕಿಂತ ಹೆಚ್ಚು ಪ್ರಸ್ತಾವನೆಗಳು ಬಂದಿದ್ದಲ್ಲಿ, ಅಂಥ ಪ್ರಸ್ತಾವನೆಗಳ ಬಗ್ಗೆ ನಿರ್ಣಯ ತೆಗೆದುಕೊಳ್ಳಲು ಸಚಿವ ಸಂಪುಟದ ಮುಂದೆ ಮಂಡಿಸುವುದು.
8. ಒಂದೇ ಪ್ರದೇಶಕ್ಕೆ ಒಂದಕ್ಕಿಂತ ಹೆಚ್ಚು ಅರ್ಜಿಗಳಿದ್ದಾಗ ಅವುಗಳಿಗೆ ಐ.ಇ.ಎಂ. ನೀಡಲು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರು Specified authority ಆಗಿರುತ್ತಾರೆ. ಇವರು ಸಚಿವರ ಅನುಮೋದನೆ ಪಡೆದು ಹೊಸ ಐ.ಇ.ಎಂ. ನೀಡಲು ಭಾರತ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದು.

ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 187 ಎಸ್‌ಜಿಎಫ್ 2007, ಬೆಂಗಳೂರು, ದಿನಾಂಕ: 11ನೇ ಸೆಪ್ಟೆಂಬರ್ 2007.**

ರಾಜ್ಯದಲ್ಲಿ ಇನ್ನು ಮುಂದೆ ಹೊಸ ಸಕ್ಕರೆ ಕಾರ್ಖಾನೆಗಳನ್ನು ಸ್ಥಾಪಿಸಲು ಮತ್ತು ಹಾಲಿ ಕಾರ್ಯ ನಿರ್ವಹಿಸುತ್ತಿರುವ ಸಕ್ಕರೆ ಕಾರ್ಖಾನೆಗಳ ಸಾಮರ್ಥ್ಯ ವಿಸ್ತರಣೆಗೆ ಅನುಮತಿ ನೀಡಲು ಈ ಕೆಳಕಂಡ ನೀತಿಯನ್ನು ಅನ್ವಯಿಸಲು ಆದೇಶಿಸಿದೆ.

1. ಹಾಲಿ ಇರುವ ಸಕ್ಕರೆ ಕಾರ್ಖಾನೆಯ ಹಾಗೂ ಈಗಾಗಲೇ ಮಂಜೂರಾತಿಯನ್ನು ಪಡೆದು ಹೊಸದಾಗಿ ಸ್ಥಾಪಿಸಲು ಉದ್ದೇಶಿಸಿರುವ ಸಕ್ಕರೆ ಕಾರ್ಖಾನೆಯ 15 ಕಿ.ಮೀ. ಸುತ್ತಳತೆಯೊಳಗಡೆ ಯಾವುದೇ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪನೆಗೆ ಅನುಮತಿ ನೀಡದಿರುವುದು.
2. ಒಂದು ನಿರ್ಧಿಷ್ಟ ಪ್ರದೇಶದಲ್ಲಿ ಹೊಸ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಒಂದಕ್ಕಿಂತ ಹೆಚ್ಚು ಅರ್ಜಿಗಳು ಬಂದಿದ್ದಲ್ಲಿ, ಐ.ಇ.ಎಂ. ಪಡೆದ ದಿನಾಂಕವನ್ನು ಗಣನೆಗೆ ತೆಗೆದುಕೊಳ್ಳುವುದು (ಆದ್ಯತೆ)
3. ಹೊಸ ಕಾರ್ಖಾನೆಗಳಿಗೆ ಕಬ್ಬಿನ ಮೀಸಲು ಕ್ಷೇತ್ರವನ್ನು 15 ಕಿ.ಮೀ. ಅಂತರದೊಳಗೆ ಹಂಚಿಕೆ ಮಾಡತಕ್ಕದ್ದು. ಒಂದು ವೇಳೆ 15 ಕಿ.ಮೀ. ಒಳಗಡೆ ಸಾಕಷ್ಟು ಕಬ್ಬು ದೊರೆಯದೆ ಇರುವಂಥ ಸಕಾರಣಗಳಿದ್ದಲ್ಲಿ, 15 ಕಿ.ಮೀ. ವ್ಯಾಪ್ತಿಯ ಹೊರಗಡೆಯ ಕಬ್ಬಿನ ಮೀಸಲು ಕ್ಷೇತ್ರವನ್ನು ಹಂಚಿಕೆ ಮಾಡಬಹುದು. ಆದರೆ ಈ ರೀತಿ ಹಂಚಿಕೆ ಮಾಡಲಾದ ಪ್ರದೇಶವು ಹಾಲಿ ಇರುವ ಸಕ್ಕರೆ ಕಾರ್ಖಾನೆಗಳ 15 ಕಿ.ಮೀ. ವ್ಯಾಪ್ತಿಯ ಹೊರಗಡೆ ಇರತಕ್ಕದ್ದು.
4. ಹಾಲಿ ಇರುವ ಕಾರ್ಖಾನೆಗಳ ವಿಸ್ತರಣೆ ಪ್ರಸ್ತಾವನೆಯನ್ನು ಈ ಕೆಳಕಂಡ ನಿಬಂಧನೆಗಳಿಗೊಳಪಟ್ಟು ಪರಿಗಣಿಸುವುದು:
    a. ಸಂಬಂಧಪಟ್ಟ ಕಾರ್ಖಾನೆಗೆ ಹಂಚಿಕೆ ಮಾಡಲಾದ ಪ್ರದೇಶಗಳಲ್ಲಿ ಸಾಕಷ್ಟು ಕಬ್ಬಿನ ಲಭ್ಯತೆ ಇರಬೇಕು ಮತ್ತು
    b. ಅಕ್ಕಪಕ್ಕದ ಕಾರ್ಖಾನೆಗಳಿಗೆ ಅಗತ್ಯವಿರುವ ಕಬ್ಬಿಗೆ ಯಾವುದೇ ಕೊರತೆಯಾಗದಂತಿರಬೇಕು.
    c. ಪ್ರಸ್ತುತ ಕಾರ್ಯ ನಿರ್ವಹಿಸುತ್ತಿರುವ ಕಾರ್ಖಾನೆಗಳ ಸಾಮರ್ಥ್ಯವನ್ನು ಹಾಲಿ ಹಂಚಿಕೆ ಮಾಡಿರುವ ಕಬ್ಬಿನ ಕ್ಷೇತ್ರಗಳ ಪರಿಮಿತಿಯೊಳಗೆ ವಿಸ್ತರಣೆ ಮಾಡುವ ಪ್ರಸ್ತಾವನೆಗಳಿಗೆ ಸಚಿವರ ಅನುಮೋದನೆಯೊಂದಿಗೆ ಅನುಮತಿ ನೀಡುವುದು.
5. 15 ಕಿ.ಮೀ. ಅಂತರದೊಳಗೆ ಯಾವುದೇ ಸಕ್ಕರೆ ಕಾರ್ಖಾನೆಗಳಿರದಿದ್ದಲ್ಲಿ ಮತ್ತು ಪ್ರಸ್ತುತ ಇರುವ ಕಾರ್ಖಾನೆಗಳಿಗೆ ಹಂಚಿಕೆ ಮಾಡಿರುವ ಹಳ್ಳಿಗಳನ್ನು ಹೊಸ ಕಾರ್ಖಾನೆಗೆ ಹಂಚಿಕೆ ಮಾಡದಿದ್ದಲ್ಲಿ, ಅಂತ ಹೊಸ ಸಕ್ಕರೆ ಸ್ಥಾಪನೆ ಪ್ರಸ್ತಾವನೆಗಳನ್ನು ಸಚಿವರ ಅನುಮೋದನೆಯೊಂದಿಗೆ ಅನುಮತಿ ನೀಡುವುದು.
6. ಪ್ರಸಕ್ತ ಇರುವ ಕಾರ್ಖಾನೆಗೆ ಹಂಚಿಕೆ ಮಾಡಿರುವ ಹಳ್ಳಿಗಳನ್ನು ಹೊಸ ಕಾರ್ಖಾನೆಗೆ ಹಂಚಿಕೆ ಮಾಡಲು ಉದ್ದೇಶಿಸಿದಲ್ಲಿ ಅಂಥ ಪ್ರಸ್ತಾವನೆಗಳ ಬಗ್ಗೆ ನಿರ್ಣಯ ತೆಗೆದುಕೊಳ್ಳಲು ಸಚಿವ ಸಂಪುಟದ ಮುಂದೆ ಮಂಡಿಸುವುದು.
7. ನಿರ್ಧಿಷ್ಟ ಪ್ರದೇಶ / ಗ್ರಾಮದಲ್ಲಿ ಸಕ್ಕರೆ ಕಾರ್ಖಾನೆ ಸ್ಥಾಪಿಸಲು ಒಂದಕ್ಕಿಂತ ಹೆಚ್ಚು ಪ್ರಸ್ತಾವನೆಗಳು ಬಂದಿದ್ದಲ್ಲಿ, ಅಂಥ ಪ್ರಸ್ತಾವನೆಗಳ ಬಗ್ಗೆ ನಿರ್ಣಯ ತೆಗೆದುಕೊಳ್ಳಲು ಸಚಿವ ಸಂಪುಟದ ಮುಂದೆ ಮಂಡಿಸುವುದು.

8. ಒಂದೇ ಪ್ರದೇಶಕ್ಕೆ ಒಂದಕ್ಕಿಂತ ಹೆಚ್ಚು ಅರ್ಜಿಗಳಿದ್ದಾಗ ಅವುಗಳಿಗೆ ಐ.ಇ.ಎಂ. ನೀಡಲು ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಸರ್ಕಾರದ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ಇವರು Specified authority ಆಗಿರುತ್ತಾರೆ. ಇವರು ಸಚಿವರ ಅನುಮೋದನೆ ಪಡೆದು ಹೊಸ ಐ.ಇ.ಎಂ. ನೀಡಲು ಭಾರತ ಸರ್ಕಾರಕ್ಕೆ ಶಿಫಾರಸ್ಸು ಮಾಡುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1663

**ಪಿ. ಆನಂದಕುಮಾರ್**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## LAW, JUSTICE AND HUMAN RIGHTS SECRETARIAT

**Sub :** Implementation of the recommendations of the First National Judicial Pay Commission with regard to Medical Facilities to the Judicial Officers.

**Read :**
1. Govt. Order No. LAW 124 LAC 1997 dated 16-6-2003.
2. Govt. Order No. LAW 124 LAC 1997 dated 17-11-2004.
3. Govt. Order No. LAW 124 LAC 1997 dated 17-11-2004.
4. Govt. Order No. LAW 124 LAC 1997 dated 25-04-2005.
5. Govt. Order No. LAW 124 LAC 1997 dated 05-05-2005.
6. Govt. Order No. LAW 124 LAC 1997 dated 30-08-2006.

**Preamble:**

The Apex Court in All India Judges Association case by their order dated 21-3-2002 in Writ Petition 1022/89 (reported in 2002 (2) KLJ page 20) had directed to implement the recommendations of FNJPC in regard to revision of pay scales and certain allowances. Accordingly, the Government have issued the Orders at Sl.No. (1) to (6) read above. Later as per Government Order No. LAW 124 LAC 1997 dated 20-5-2006, the allowances sanctioned in the Orders, read above, were given with retrospective effect from 1-11-1999. Similarly, the Sumptuary Allowance granted under Government Order No. LAW 124 LAC 1997 dated 20-5-2006 with prospective effect was modified as per Govt. Order No. LAW 124 LAC 1997 dated 8-12-2006 giving the benefit with retrospective effect from 1-11-1999.

Further, Apex Court in the same case (Writ Petition 1022/89) in its Order dated 9-5-2007 has directed the State Government to take appropriate steps to extend medical facilities to the Judicial Officers working in the State on par with the facilities extended to the Members of Legislature. Such Medical Facilities to the Members of State Legislature are governed by the Karnataka Legislature (Members' Medical Attendance) Rules, 1968.

Karnataka Judicial Officers' Association has requested the Government to implement the recommendations of the FNJPC in view of the directions of the Apex Court in its Order dated 6-12-2005 and 9-5-2007 in regard to medical facilities on par with Members of State Legislature w.e.f. 1-11-1999.

In the circumstances, Government issues the following Orders.

**Government Order No. LAW 67 LAC 2007, Bangalore, Dated the 30th August 2007**

The Government hereby sanctions the Medical facilities to the Judicial Officers in the State on par with the Members of Legislature as provided in Karnataka Legislative (Members' Medical Attendance) Rules, 1968 as amended from time to time till further orders or framing of separate rules in this regard. The controlling officers empowered to countersign the Medical Reimbursement claims of the Judicial Officers as per Karnataka Governments Servants (Medical Attendance) Rules, 1963, shall be the countersigning officers for the said purpose. The Hospitals and Diagnostic Centres notified under the Karnataka Legislative (Members' Medical Attendance) Rules shal be the notified Hospitals and Diagnostic Centres for the purpose of medical facilities to the Judicial Officers.

This Order issues with the concurrence of DPAR vide their U.O. Note No. DPAR 506 SRF 2006, dated 21-7-2007. Concurrence of Finance Department is also obtained vide their endorsement No. FD 726 SER-2/2007 dated 21-8-2007.

By order and in the name of the Governor of Karnataka,

PR. 1666

**E. SHIVANANDA**
Under Secretary to Government (Admn-1)
Law, Justice & Human Rights Department.

**Sub :** Implementation of the recommendation of the First National Judicial Pay Commission in regard to Leave Travel Concession facility to the Judicial Officers working in the State.

**Read :** Order of the Hon'ble Supreme Court dated 9-5-2007 in Writ Petition No. 1022/89 (All India Judges Association and others Vs Union of India and others.

**Preamble:**

The State Government employees are entitled for Leave Travel Concession once in service as per Rule 553(2) of KCSRs, 1957. However, the First National Judicial Officers Pay Commission (FNJPC) in its report has recommended that in so far as Judicial Officers working in the State, the said facility shall be extended once in every four years.

Hon'ble Supreme Court in its order dated 9-5-2007 in Writ Petition 1022/89 has directed the State Government to extend the said facility to the Judicial Officers in the State. After taking into consideration the recommendation of the FNJPC and the directions of the Hon'ble Supreme Court, Government has decided to extend the said facility to the Judicial Officers working in the State by issuing an Executive Order till suitable amendment is made to the above rule in so far as the Judicial Officers are concerned.

**Government Order No. LAW 62 LAC 2006, Bangalore, Dated 10th September 2007**

Government of Karnataka are pleased to extend the Leave Travel concession facility once in every 4 years w.e.f. 1-1-2007 to Judicial Officers working in the State. For the said purpose 1-1-2007 to 31-12-2010 is treated as Block period to avail said facility. However, the other provisions of the rules will apply. Necessary amendment to KCSRs will be issued separately.

This order issues with the concurrence of Finance Department vide their UO Note No. FD 34 SRP 2007 dated 5-9-2007.

By order and in the name of the Governor of Karnataka,

PR. 1667

**E. SHIVANANDA**

Under Secretary to Government (Admn-1)

Law, Justice & Human Rights Department.

**Sub :** Implementation of the recommendations of the First National Judicial Pay Commission in regard to D.A. Formula including merger of 50% D.A. with basic pay to the Judicial Officers as applicable to Central Government Officers-reg.

**Read :**
1. Govt. Order No. LAW 124 LAC 1997 dated 07-05-2003.
2. Order of the Hon'ble Supreme Court dated 09-05-2007 in Writ Petition No. 1022/89 (All India Judges Association and others Vs Union of India and others)
3. O.M. dated 1-3-2004 of Ministry of Finance, Government of India.

**Preamble:**

In pursuance of the directions of the Apex Court, in All India Judges Association case, Government has issued Government Order No. LAW 124 LAC 1997 dated 7-5-2003, directing that the Dearness Allowance formula as applicable to the Central Government employees shall be applicable to the Judicial Officers in the State. Since the Dearness Allowance formula as applicable to Central Government employees in the above said Govt. Order was not clearly specified, now it is necessary to specify the same. The Dearness Allowance formula referred to above mean revised Dearness Allowance sanctioned from time to time by Central Government should be made applicable to Judicial Officers of the State Government also.

The Apex Court in its Order dated 9-5-2007 has directed the State of Karnataka to implement the merger of 50% of Dearness Allowance with basic pay as per the subsequent recommendations of the Fifth Central Pay Commission. The Central Government by O.M. dated 1-3-2004 in accordance with the recommendations of fifth Central Pay Commission, has directed that with effect from 1-4-2004, Dearness Allowance equal to 50% of the existing basic pay shall be merged with the basic pay and be shown distinctly as Dearness Pay (DP) which would be counted for purposes like payment of allowances, transfer grant, License Fee, retirement benefits, contribution of GPF, monthly contribution of CGHS, various advances etc., and that the entitlements for LTC, TA/DA while on tour and transfer and Government accommodation shall, however, continue to be governed on the basis of the basic pay alone without taking into account Dearness Pay.

**Government Order No. LAW 62 LAC 2006(P), Bangalore, Dated 10th September 2007**

The Government after careful consideration of the matter, is pleased to sanction that with effect from 1-4-2004 Dearness Allowance equal to 50% of the existing basic pay shall be merged with the basic pay and shown distinctly as Dearness Pay (DP) which would be counted for purposes like payment of allowances, transfer grant, retirement benefits, contribution of GPF, various advances, etc., The entitlements for LTC, TA/DA while on tour and transfer and Government accommodation shall, however, continue to be governed on the basis of the basic pay alone without taking into account Dearness Pay. The Dearness Allowance converted into Dearness Pay would be deducted from the existing rate of Dearness Allowance.

The rates of Dearness Allowance as applicable to Central Government Servants from 1-4-2004 shall be applicable to the Judicial Officers in the State.

To ensure that pensioners retired between 1-4-2004 to 31-8-2007 do not face any loss in fixation of pension, as a special dispensation in their case, Dearness Allowance equal to 50% of the basic pay would be treated as basic pay for purposes of computation of pension in respect of basic pay received by them.

The arrears of Dearness Pay and Dearness Allowance thereon payable to the Judicial Officers with effect from 1-4-2004 till 31-3-2007 shall be paid in cash after 31-3-2008 i.e., during the financial year 2008-09. The difference amount for the period from 1-4-2007 shall be paid in cash with immediate effect.

This order is issued with the concurrence of Finance Department vide their U.O. Note No. FD 34 SRP 2007 dated 5-9-2007.

By order and in the name of the Governor of Karnataka,

PR. 1668

**E. SHIVANANDA**
Under Secretary to Government,
Law, Justice & Human Rights Department.

**ಲೋಕೋಪಯೋಗಿ ಸಚಿವಾಲಯ**

**ವಿಷಯ :** ಹಾಸನ ನಗರದ ಪರಿಧಿಯಲ್ಲಿ ಹೊರ ವರ್ತುಲ ರಸ್ತೆ ನಿರ್ಮಾಣ.

**ಓದಲಾಗಿದೆ:** ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕರಅನಿನಿ/ವ್ಯ.ನಿ./591/2007–08, ದಿನಾಂಕ: 18–5–2007 ಮತ್ತು 29–8–2007.

**ಪ್ರಸ್ತಾವನೆ :**

ಹಾಸನ ನಗರವು ಒಂದು ಪ್ರಮುಖ ಜಿಲ್ಲಾ ಮುಖ್ಯ ಕೇಂದ್ರವಾಗಿರುತ್ತದೆ. ಈ ನಗರದ ಸುತ್ತಮುತ್ತಲೂ ಪ್ರಮುಖವಾದ ಪ್ರವಾಸಿ ತಾಣಗಳು ಇರುತ್ತವೆ. ಈ ನಗರದಲ್ಲಿ ರಾಷ್ಟ್ರೀಯ ಹೆದ್ದಾರಿ ಮತ್ತು ಪ್ರಮುಖ ರಾಜ್ಯ ಹೆದ್ದಾರಿಗಳು ಹಾಯ್ದು ಹೋಗುತ್ತವೆ. ಅವುಗಳು ಯಾವುದೆಂದರೆ, ಬೆಂಗಳೂರು–ಮಂಗಳೂರು ರಾಷ್ಟ್ರೀಯ ಹೆದ್ದಾರಿ (ಎನ್.ಹೆಚ್.48), ಹಳೇಬೀಡು ಮತ್ತು ಆನೇಚೌಕೂರು ಮಧ್ಯೆ ಸಂಪರ್ಕ ಕಲ್ಪಿಸುವ ಹಳೇಬೀಡು–ಹಾಸನ–ಅರಕಲಗೂಡು–ಪಿರಿಯಾಪಟ್ಟಣ–ಕಣ್ಣಾನೂರು ರಾಜ್ಯ ಹೆದ್ದಾರಿ (ಹೆಚ್.ಹೆಚ್.ಎ.ಪಿ.ಸಿ.) ಬೇಲೂರು ಮತ್ತು ಮೈಸೂರಿಗೆ ಸಂಪರ್ಕ ಕಲ್ಪಿಸುವ ಬಿಳಿಕೆರೆ–ಬೇಲೂರು ರಸ್ತೆ, ಅದಲ್ಲದೆ ಹಾಸನ–ತಿಪಟೂರು ರಸ್ತೆಯು ಹಾಸನದಿಂದ ಪ್ರಾರಂಭವಾಗುತ್ತದೆ.

ಈ ನಗರವು ಮಹತ್ವದ ಜಾಗದಲ್ಲಿ ನೆಲೆಗೊಂಡಿರುವುದರಿಂದ ದಕ್ಷಿಣ ಕರ್ನಾಟಕದ ಪೂರ್ವ ಪಶ್ಚಿಮ ಭಾಗದ ನಡುವೆ ಮತ್ತು ದಕ್ಷಿಣ ಕರ್ನಾಟಕ ಮತ್ತು ಉತ್ತರ ಕರ್ನಾಟಕದ ನಡುವೆ ಸಂಚರಿಸುವ ಬಹಳಷ್ಟು ವಾಹನಗಳು ಮೇಲೆ ನಮೂದಿಸಿರುವ ರಸ್ತೆಗಳನ್ನು ಬಳಸಿಕೊಂಡು ಹಾಸನ ನಗರದ ಮುಖಾಂತರವೇ ಸಂಚರಿಸಬೇಕಾಗುತ್ತದೆ. ಇದಲ್ಲದೇ, ತಿಪಟೂರಿನಿಂದ ರಾಜ್ಯ ಹೆದ್ದಾರಿ–68ರ ಮೂಲಕ ಮತ್ತು ರಾಷ್ಟ್ರೀಯ ಹೆದ್ದಾರಿ–48 (ಚಿಕ್ಕನಾಯಕನಹಳ್ಳಿ–ಹಾಸನ) ದಿಂದ ಮಂಗಳೂರು ಬಂದರಿಗೆ ಹೋಗುವ ಕಬ್ಬಿಣ ಅದಿರು ತುಂಬಿದ ಲಾರಿಗಳು ಹಾಸನ ಪಟ್ಟಣದ ಮುಖಾಂತರ ಸಂಚರಿಸುತ್ತಿರುತ್ತವೆ. ಇದರಿಂದ ಹಾಸನ ನಗರದಲ್ಲಿ ವಾಹನ ದಟ್ಟಣೆಯು ಹೆಚ್ಚಾಗಿರುತ್ತದೆ.

ಈ ಮೇಲ್ಕಂಡ ವಿಷಯವನ್ನು ಗಮನಿಸಿ, ಸೂಕ್ತ ಮತ್ತು ಸಮರ್ಪಕ ವಾಹನ ಸಂಚಾರಕ್ಕೆ ಅನುವು ಮಾಡಿಕೊಡಲು ಹಾಸನ ಪಟ್ಟಣಕ್ಕೆ ಹೊರ ವರ್ತುಲ ರಸ್ತೆಯನ್ನು ನಿರ್ಮಾಣ ಮಾಡುವುದು ಅವಶ್ಯವಿದ್ದು, ಸದರಿ ಪ್ರಸ್ತಾವನೆಯನ್ನು ದಿನಾಂಕ: 14–7–2007ರಂದು ನಡೆದ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ 55ನೇ ಮಂಡಳಿಯ ಸಭೆಯಲ್ಲಿ ಮಂಡಿಸಲಾಗಿ, ಮಂಡಳಿ ಸಭೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಯೋಜನೆಗಾಗಿ ಸಲಹೆಗಾರರಿಂದ ವಿವರವಾದ ಯೋಜನಾ ವರದಿಯನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ಮೂಲಕ ತಯಾರಿಸಲು ಸೂಚಿಸಲಾಗಿರುತ್ತದೆ. ಏತನ್ಮಧ್ಯೆ, ಈ ವರ್ತುಲ ರಸ್ತೆಯ ಪಂಕ್ತಿಯನ್ನು (ಅಲೈನ್‌ಮೆಂಟ್) ನಿರ್ಧರಿಸಿ, ಯೋಜನಾ ವರದಿಯನ್ನು ತಯಾರಿಸಿ ಮೊದಲನೇ ಹಂತದಲ್ಲಿ

4 ಪಥಗಳ ವರ್ತುಲ ರಸ್ತೆಯನ್ನು ತೆಗೆದುಕೊಳ್ಳಲು ನಿಗಮಕ್ಕೆ ತಿಳಿಸಿ ಇದಕ್ಕಾಗಿ 2007–08ನೇ ಸಾಲಿನಲ್ಲಿ ಬೇಕಾಗುವ ಅನುದಾನವನ್ನು ಕೋರಲು ಸೂಚಿಸಲಾಗಿತ್ತು.

ಅದರಂತೆ ಈ ಯೋಜನೆಯು ವಿವರವಾದ ಯೋಜನಾ ವರದಿಯನ್ನು ಸಲಹೆಗಾರರ ಮುಖಾಂತರ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ತಯಾರಿಸಲಾಗಿದ್ದು, ಈ ವಿವರವಾದ ವರದಿಯಲ್ಲಿ ಈ ಕೆಳಕಂಡ ಪ್ರಸ್ತಾವನೆಗಳನ್ನು ಮಾಡಲಾಗಿದೆ.

ಅ) ಹಾಸನ ನಗರಕ್ಕೆ ಯೋಜಿಸಿರುವ ಹೊರ ವರ್ತುಲ ರಸ್ತೆಯ ಒಟ್ಟು ಉದ್ದ 53.627 ಕಿ.ಮೀ.ಗಳು.

ಆ) ಈ ಯೋಜನೆಯ ಮೊದಲನೇ ಹಂತದಲ್ಲಿ ಮೀಡಿಯನ್‌ನಿಂದ ವಿಭಾಜಿತ ನಾಲ್ಕು ಪಥಗಳ ರಸ್ತೆಯನ್ನು ನಿರ್ಮಿಸಲು ಯೋಜಿಸಿದೆ. ಮುಂದೆ ಎರಡನೇ ಹಂತದಲ್ಲಿ ಸರ್ವೀಸ್ ರಸ್ತೆಯನ್ನೊಳಗೊಂಡಂತೆ ಆರು ಪಥಗಳ ರಸ್ತೆಯನ್ನಾಗಿ ನಿರ್ಮಿಸಲು ಯೋಜಿಸಲಾಗಿದೆ.

ಇ) ಈ ಮೊದಲನೇ ಹಂತದ ಯೋಜನೆಯ ಒಟ್ಟು ಅಂದಾಜು ಮೊತ್ತ ರೂ. 250.00 ಕೋಟಿಗಳು, ಭೂಸ್ವಾಧೀನ ಮೊತ್ತ ರೂ. 45.00 ಕೋಟಿ ಹೊರತುಪಡಿಸಿ.

ಈ) ಈ ರಸ್ತೆಯ ನಿರ್ಮಾಣಕ್ಕಾಗಿ ಒಟ್ಟು 60 ಮೀಟರ್ ಅಗಲದ ರೈಟ್‌ಆಫ್‌ವೇ (ಆರ್.ಓ.ಡಬ್ಲ್ಯೂ)ಯ ಅಗಲಕ್ಕೆ ಬೇಕಾದ ಸುಮಾರು 900 ಎಕರೆ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಬೇಕಾಗಿತ್ತದೆ.

2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ "5054–03–337–0–10 ರಸ್ತೆಗಳು" ಅಡಿಯಲ್ಲಿ ಸದರಿ ರಸ್ತೆಯ ನಿರ್ಮಾಣಕ್ಕಾಗಿ ರೂ. 50.00 ಕೋಟಿಗಳ ಅವಕಾಶ ಒದಗಿಸಲಾಗಿದೆ. ಮೊದಲನೇ ಹಂತ ಭಾಗ–1ರಲ್ಲಿ ಸದರಿ ಯೋಜನೆಯ ಒಟ್ಟು ಉದ್ದ 53.627 ಕಿಮೀ. ಗಳಲ್ಲಿ ಭಾಗಶಃ 33.00 ಕಿ.ಮೀ.ನಷ್ಟು ಉದ್ದದ ರಸ್ತೆಯು ರೂ. 150.00 ಕೋಟಿಗಳ ವೆಚ್ಚದಲ್ಲಿ ಕೈಗೊಳ್ಳಲು ಮತ್ತು ಭೂಸ್ವಾಧೀನವನ್ನು ಪೂರ್ಣ ವರ್ತುಲ ರಸ್ತೆಯ ಉದ್ದಕ್ಕೆ ಮಾಡಲು ಪ್ರಸ್ತಾಪಿಸಲಾಗಿದೆ. ಮೊದಲನೇ ಹಂತದಲ್ಲಿ ಬೇಕಾಗುವ ಅನುದಾನದ ವಿವರಗಳು ಈ ಕೆಳಕಂಡಂತಿವೆ:

(ರೂ. ಕೋಟಿಗಳಲ್ಲಿ)

| | | ಕಾಮಗಾರಿಯ ಮೊತ್ತ | | |
|---|---|---|---|---|
| ವರ್ಷ | ಭೂಸ್ವಾಧೀನ ಮೊತ್ತ | ಮೊದಲನೇ ಹಂತ ಭಾಗ–1 (33.00 ಕಿಮೀ.) | ಮೊದಲನೇ ಹಂತ ಭಾಗ–2 (20.267 ಕಿಮೀ) | ಒಟ್ಟು |
| 2007–08 | 15.00 | 45.00 | – | 60.00 |
| 2008–09 | 30.00 | 70.00 | 30.00 | 130.00 |
| 2009–10 | – | 35.00 | 70.00 | 105.00 |
| ಒಟ್ಟು | | | | **295.00** |

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಸರ್ಕಾರಿ ಆದೇಶವನ್ನು ಹೊರಡಿಸುವ ಅವಶ್ಯಕತೆ ಇರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 64 ಇಎಪಿ 2007, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2007.**

ಮೇಲಿನ ಪ್ರಸ್ತಾವನೆಯನ್ನು ಸರ್ಕಾರದಲ್ಲಿ ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

1. ಹಾಸನ ನಗರಕ್ಕೆ ಹೊರ ವರ್ತುಲ ರಸ್ತೆ ನಿರ್ಮಾಣ ಕಾಮಗಾರಿ ಯೋಜನೆಯನ್ನು ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮ ನಿಯಮಿತದ ವತಿಯಿಂದ ಕೈಗೊಳ್ಳುವ ಪ್ರಸ್ತಾವನೆಗೆ ತಾತ್ವಿಕ ಅನುಮೋದನೆ ನೀಡಿದೆ.
2. ಈ ಯೋಜನೆಯ ಮೊದಲ ಹಂತದ ಮೊದಲ ಘಟ್ಟದ ಕಾಮಗಾರಿಯ ರೂ. 150.00 ಕೋಟಿಗಳ ಅಂದಾಜು ವೆಚ್ಚಕ್ಕೆ ಆಡಳಿತಾತ್ಮಕ ಅನುಮೋದನೆ ನೀಡಿದೆ.
3. ಈ ಯೋಜನೆಗೆ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಒದಗಿಸಲಾದ ರೂ. 50 ಕೋಟಿಗಳ ಅನುದಾನವನ್ನು ಉಪಯೋಗಿಸಿಕೊಂಡು ಯೋಜನೆಯ ಅನುಷ್ಠಾನ ಪ್ರಕ್ರಿಯೆಯನ್ನು ಪ್ರಾರಂಭಿಸಲು ಹಾಗೂ ಈ ಯೋಜನೆಗೆ ಅವಶ್ಯವಿರುವ ಭೂಸ್ವಾಧೀನ ಪ್ರಕ್ರಿಯೆಯನ್ನು ಕಂದಾಯ ಇಲಾಖೆಯಿಂದ ಕೂಡಲೇ ಪ್ರಾರಂಭಿಸುವುದು.
4. ಈ ಯೋಜನೆಗೆ ಅವಶ್ಯವಿರುವ ಉಳಿಕೆ ಅನುದಾನವನ್ನು ಮುಂದಿನ ಆರ್ಥಿಕ ವರ್ಷದ ಆಯವ್ಯಯದಲ್ಲಿ ಕರ್ನಾಟಕ ರಸ್ತೆ ಅಭಿವೃದ್ಧಿ ನಿಗಮಕ್ಕೆ ಒದಗಿಸಲು ಕ್ರಮ ಕೈಗೊಳ್ಳಲಾಗುವುದು.

ಆ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ. ಲೋಇ 550 ಆಕೋ.1/2007 ದಿನಾಂಕ: 28–8–2007ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1669

**ವಿಜಯ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಲೋಕೋಪಯೋಗಿ ಇಲಾಖೆ (ಇಎಪಿ)

**ಆರ್ಥಿಕ ಸಚಿವಾಲಯ**

**ವಿಷಯ :** ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಗ್ರಾಮೀಣ ಅಭಿವೃದ್ಧಿ ಇಲಾಖೆ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಹಾಗೂ ಕೃಷ್ಣಾ ಭಾಗ್ಯ ಜಲನಿಗಮ ಇತ್ಯಾದಿ ಕಚೇರಿಗಳಲ್ಲಿ ಉನ್ನತೀಕರಿಸಲಾದ ಲೆಕ್ಕಪರಿಶೋಧನಾಧಿಕಾರಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ. ಆಇ 150 ರಾಲೆಪ 2000, ದಿ: 2–6–2000.
2. ಸರ್ಕಾರದ ಆದೇಶ ಸಂ. ಆಇ 251 ರಾಲೆಪ 2005, ದಿ: 17–10–2005.
3. ನಿಯಂತ್ರಕರು, ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪತ್ರ ಸಂ: ಸಿಎಸ್ಎ 1 ಎಓಎ 2007, ದಿ: 25–7–07.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿ: 2–6–2000ರ ಆದೇಶದಲ್ಲಿ ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಗ್ರಾಮೀಣಾಭಿವೃದ್ಧಿ ಇಲಾಖೆಯ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಹಾಗೂ ಕೃಷ್ಣ ಭಾಗ್ಯ ಜಲನಿಗಮ ಇತ್ಯಾದಿ ಕಛೇರಿಗಳಲ್ಲಿ ರಾಜ್ಯ ಲೆಕ್ಕಪತ್ರ ಇಲಾಖೆಯ ನೇರ (ಎನ್ಕೇಡರ್ಡ್) ಹುದ್ದೆಗಳೆಂದು ಪರಿಗಣಿಸಲಾಗಿರುವ 229 ಲೆಕ್ಕಾಧೀಕ್ಷಕರ ಹುದ್ದೆಗಳನ್ನು ಲೆಕ್ಕಪರಿಶೋಧನಾಧಿಕಾರಿ ಹುದ್ದೆಗೆ ಉನ್ನತೀಕರಿಸಿ ಆದೇಶಿಸಲಾಗಿತ್ತು. ಮೇಲೆ (2)ರಲ್ಲಿ ಓದಲಾದ ದಿ: 17–10–05ರ ಸರ್ಕಾರಿ ಆದೇಶದಲ್ಲಿ ಉನ್ನತೀಕರಿಸಿರುವ ಸದರಿ ಹುದ್ದೆಗಳನ್ನು ದಿ: 2–6–05ರಿಂದ ದಿ: 1–6–07ರವರೆಗೆ ಮುಂದುವರಿಸಿ ಆದೇಶಿಸಲಾಗಿದೆ. ರಾಜ್ಯ ಲೆಕ್ಕಪತ್ರ ಇಲಾಖೆ ನಿಯಂತ್ರಕರ ಮೇಲೆ (2)ರಲ್ಲಿ ಓದಲಾಗಿರುವ ಪತ್ರದಲ್ಲಿ ದಿ: 17–10–05ರ ಆದೇಶದಲ್ಲಿ ಮುಂದುವರಿಸಿರುವ 229 ಲೆಕ್ಕಪರಿಶೋಧನಾಧಿಕಾರಿ ಹುದ್ದೆಗಳನ್ನು ದಿ: 2–6–2007 ರಿಂದ 1–6–2010ರವರೆಗೆ ಮುಂದುವರಿಸಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ನಿಯಂತ್ರಕರು ರಾಜ್ಯ ಲೆಕ್ಕಪತ್ರ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ 252 ರಾಲೆಪ 2007, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ಹೇಳಿರುವ ವಿವರಗಳ ಮೇರೆಗೆ ಸರ್ಕಾರಿ ಆದೇಶ ಸಂ:ಆಇ 150 ರಾಲೆಪ 2000ರ ದಿ: 2–6–2000ದ ಅನುಬಂಧದಲ್ಲಿ ನಮೂದಿಸಿರುವ ಲೋಕೋಪಯೋಗಿ ಇಲಾಖೆ, ನೀರಾವರಿ ಇಲಾಖೆ, ಗ್ರಾಮೀಣಾಭಿವೃದ್ಧಿ ಇಲಾಖೆ, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಹಾಗೂ ಕೃಷ್ಣ ಭಾಗ್ಯ ಜಲನಿಗಮ ಇತ್ಯಾದಿ ಕಚೇರಿಗಳಲ್ಲಿನ ರಾಜ್ಯ ಲೆಕ್ಕಪತ್ರ ಇಲಾಖೆಯ ಕಚೇರಿಗಳಲ್ಲಿನ ರಾಜ್ಯ ಲೆಕ್ಕಪತ್ರ ಇಲಾಖೆಯ ನೇರ (ಎನ್‌ಕೇಡರ್ಡ್) ಹುದ್ದೆಗಳೆಂದು ಪರಿಗಣಿಸಿರುವ ಮತ್ತು ಲೆಕ್ಕಾಧೀಕ್ಷಕರ ಹುದ್ದೆಯಿಂದ ಲೆಕ್ಕಪರಿಶೋಧನಾಧಿಕಾರಿ ಹುದ್ದೆಗೆ ಉನ್ನತೀಕರಿಸಲಾಗಿರುವ 229 ಹುದ್ದೆಗಳನ್ನು ದಿ: 2–6–2007 ರಿಂದ 1–6–2010ರವರೆಗೆ ಮೂರು ವರ್ಷಗಳ ಅವಧಿಗೆ ಮುಂದುವರಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1670

**ಎನ್. ಶ್ರೀನಿವಾಸ ಮೂರ್ತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ & ಮುಂಗಡ)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ :** ಕಬ್ಬು ಬೆಳೆದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ರಾಜ್ಯ ಸರ್ಕಾರದಿಂದ ವಿಶೇಷ ನೆರವು.

**ಓದಲಾಗಿದೆ:**
1. ದಿನಾಂಕ: 12–4–2007ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿನ ತೀರ್ಮಾನಗಳು.
2. ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 13–6–07.
3. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಎಸ್‌ಟಿಟಿ/13/2007–08, ದಿನಾಂಕ: 18–7–07, 25–7–07, 31–7–2007, 4–8–07, 14–8–07ರಲ್ಲಿರುವ ವಿವಿಧ ಪತ್ರಗಳು.
4. ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪತ್ರ ಸಂಖ್ಯೆ: ಡಿಎಸ್‌ಕೆ/ಎಸ್‌ಟಿಟಿ/13/2007–08, ದಿನಾಂಕ: 6–8–07, 13–8–07, 14–8–07 ಮತ್ತು 16–8–07ರ ವಿವಿಧ ಪತ್ರಗಳು.

**ಪ್ರಸ್ತಾವನೆ :**

ಮೇಲೆ ಓದಲಾದ (2)ರಲ್ಲಿರುವ ಸರ್ಕಾರದ ಆದೇಶದಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ ಈ ಕೆಳಕಂಡ ಸಹಾಯಧನ ಸೌಲಭ್ಯವನ್ನು ನೀಡಲು ಸರ್ಕಾರದ ಒಪ್ಪಿಗೆಯನ್ನು ನೀಡಲಾಗಿದೆ.

ಅ) ದಿನಾಂಕ: 16–4–2007 ರಿಂದ 31–5–2007ರವರೆಗೆ ವಿವಿಧ ಕಾರ್ಖಾನೆಗಳಲ್ಲಿ ನುರಿಸಿದ ಕಬ್ಬಿಗೆ ಪ್ರತಿ ಟನ್ನಿಗೆ ರೂ. 100/–ರಂತೆ ಸಹಾಯಧನ.

ಆ) ನೆರೆ ರಾಜ್ಯಗಳಿಗೆ ಸರಬರಾಜಾದ ಕಬ್ಬನ್ನು ಒಳಗೊಂಡಂತೆ ಪ್ರತಿ ಟನ್‌ಗೆ 50 ಕಿ.ಮೀ. ಗಿಂತ ಹೆಚ್ಚಿನ ದೂರಕ್ಕೆ ಸಾಗಾಣಿಕೆ ಮಾಡಿದ ಪ್ರತಿ ಕಿ.ಮೀ.ಗೆ ರೂ. 2/– ರಂತೆ ಸಹಾಯಧನ.

ಇ) 12 ತಿಂಗಳು ಪೂರೈಸಿ ಪಕ್ವವಾದ ಹಾಗೂ ಕಟಾವಾಗದೇ ಜಮೀನಿನಲ್ಲಿ ಉಳಿದಿರುವ ಕಬ್ಬಿಗೆ ರೈತರಿಗೆ ಪ್ರತಿ ಹೆಕ್ಟೇರ್‌ಗೆ ರೂ. 25,000/– ಗಳ ಸಹಾಯಧನ. ಈ ಸಹಾಯಧನ ಸೌಲಭ್ಯವನ್ನು ಒಟ್ಟಾರೆ 10000 ಹೆಕ್ಟೇರ್‌ಗೆ ಸೀಮಿತಗೊಳಿಸಿದೆ.

ಮೇಲೆ ಓದಲಾದ (3)ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರಗಳಲ್ಲಿ ರಾಜ್ಯದ ಸಕ್ಕರೆ ಕಾರ್ಖಾನೆಗಳು ದಿನಾಂಕ: 16–4–07 ರಿಂದ 31–5–2007ರವರೆಗೆ ಕಬ್ಬನ್ನು 50 ಕಿ.ಮೀ. ಗಿಂತ ಹೆಚ್ಚಿನ ದೂರದಿಂದ ಸಾಗಾಣಿಕೆ ಮಾಡಿಕೊಂಡಿದ್ದು, ಮತ್ತು ರೈತರುಗಳು 50 ಕಿ.ಮೀ.ಗಿಂತ ಹೆಚ್ಚಿನ ದೂರದ ಕಾರ್ಖಾನೆಗಳಿಗೆ ಕಬ್ಬನ್ನು ಸರಬರಾಜು ಮಾಡಿದ್ದು, ಈ ಸಂಬಂಧ ದಿನಾಂಕ: 13–6–07ರ ಆದೇಶದ (ಅ)ನಲ್ಲಿ ತಿಳಿಸಿದಂತೆ 50 ಕಿ.ಮೀ. ಗಿಂತ ಹೆಚ್ಚಿನ ದೂರಕ್ಕೆ ಸಾಗಾಣಿಕೆ ಮಾಡಿದ ಮತ್ತು ಮಾಡಿಕೊಂಡ ಪ್ರತಿ ಟನ್ ಕಬ್ಬಿಗೆ ರೂ. 2/– ರಂತೆ ಸಾಗಾಣಿಕೆ ಸಹಾಯಧನ ಮೊತ್ತ 3,10,09.480/– ರೂ.ಗಳನ್ನು ಸಕ್ಕರೆ ಕಾರ್ಖಾನೆಗಳಿಗೆ ಮತ್ತು ರೈತರಿಗೆ ನೀಡಲು ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಬೇಕೆಂದು ಆಯುಕ್ತರು ಶಿಫಾರಸ್ಸು ಮಾಡಿದ್ದಾರೆ.

ಮೇಲೆ ಓದಲಾದ (4) ರಲ್ಲಿರುವ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ರವರ ಪತ್ರಗಳಲ್ಲಿ ದಿನಾಂಕ: 13–6–07ರ ಆದೇಶದಲ್ಲಿನ (ಇ)ನಲ್ಲಿ ತಿಳಿಸಿದಂತೆ, 12 ತಿಂಗಳು ಪೂರೈಸಿ ಪಕ್ವವಾದ ಹಾಗೂ ಕಟಾವಾಗದೇ ಜಮೀನಿನಲ್ಲಿ ಉಳಿದಿರುವ ಕಬ್ಬಿಗೆ ರೈತರಿಗೆ ಪ್ರತಿ ಹೆಕ್ಟೇರ್‌ಗೆ ರೂ. 25,000/– ರಂತೆ ಸಹಾಯಧನ ಮೊತ್ತ ಒಟ್ಟು 19,43,29.550/– ರೂ.ಗಳನ್ನು 5 ಜಿಲ್ಲೆಗಳ ಸಂಬಂಧಿಸಿದ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಬೇಕೆಂದು ಆಯುಕ್ತರು ಶಿಫಾರಸ್ಸು ಮಾಡಿದ್ದಾರೆ.

ಆಯುಕ್ತರು ಕಬ್ಬು ಅಭಿವೃದ್ಧಿ ರವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 2007 (ಭಾ–2), ಬೆಂಗಳೂರು, ದಿನಾಂಕ: 12ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ರಾಜ್ಯದ ಕಬ್ಬು ಬೆಳೆಗಾರರು ಮತ್ತು ಸಕ್ಕರೆ ಕಾರ್ಖಾನೆಗಳನ್ನು ಪ್ರೋತ್ಸಾಹಿಸುವ ದೃಷ್ಟಿಯಿಂದ 50 ಕಿ.ಮೀ. ಹೊರಗಿನಿಂದ ಸರಬರಾಜು ಮಾಡಿಕೊಂಡ / ಸರಬರಾಜು ಮಾಡಲಾದ ಕಬ್ಬಿಗೆ ಪ್ರತಿ ಟನ್‌ಗೆ ಪ್ರತಿ ಕಿ.ಮೀ. 2/– ರೂ.ನಂತೆ ಸಾಗಾಣಿಕೆ ಸಹಾಯಧನ ರೂ. 3,10,09.480/– (ಮೂರು ಕೋಟಿ ಹತ್ತು ಲಕ್ಷ ಒಂಬತ್ತು ಸಾವಿರದ ನಾಲ್ಕೂ ನೂರ ಎಂಬತ್ತು ರೂಗಳು ಮಾತ್ರ) ಮತ್ತು ಕಟಾವಾಗದೇ ಜಮೀನಿನಲ್ಲಿ ಉಳಿದಂತಹ 12 ತಿಂಗಳು ಪೂರೈಸಿ ಪಕ್ವವಾದ ಕಬ್ಬಿಗೆ ಪ್ರತಿ ಹೆಕ್ಟೇರ್‌ಗೆ 25,000/– ರೂನಂತೆ ರೈತರಿಗೆ ಸಹಾಯಧನ 19,43,29.550/– (ಹತ್ತೊಂಬತ್ತು ಕೋಟಿ ನಲವತ್ತು ಮೂರು ಲಕ್ಷ ಇಪ್ಪತ್ತೊಂಬತ್ತು ಸಾವಿರದ ಐನೂರ ಐವತ್ತು ರೂಗಳು ಮಾತ್ರ) ರೂಗಳು ಸೇರಿ ಒಟ್ಟು 22,53,39.030/– (ಇಪ್ಪತ್ತೆರಡು ಕೋಟಿ ಐವತ್ತು ಮೂರು ಲಕ್ಷ ಮೂವತ್ತೊಂಬತ್ತು ಸಾವಿರದ ಮೂವತ್ತು ರೂಗಳು ಮಾತ್ರ) ರೂಗಳನ್ನು ಈ ಆದೇಶದ ಅನುಬಂಧದಲ್ಲಿ ನಮೂದಿಸಿರುವ ಸಂಬಂಧಪಟ್ಟ ಜಿಲ್ಲಾಧಿಕಾರಿಯವರಿಗೆ ಸದರಿ ಅನುಬಂಧದಲ್ಲಿ ತಿಳಿಸಿರುವ ಸಕ್ಕರೆ ಕಾರ್ಖಾನೆಗಳಿಗೆ ಮತ್ತು ಅರ್ಹ ರೈತರಿಗೆ ಪಾವತಿಸುವ ಸಲುವಾಗಿ ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

2007–08ನೇ ಸಾಲಿನ ಆಯವ್ಯಯದಲ್ಲಿ ಯಾವುದೇ ಹಣವನ್ನು ಈ ಕಾರ್ಯಕ್ರಮಗಳಿಗೆ ನಿಗಧಿ ಪಡಿಸಿಲ್ಲದ ಕಾರಣ ಈ ಹಣವನ್ನು 2007–08ನೇ ಸಾಲಿನ ಪೂರಕ ಅನುದಾನ (ಮೊದಲನೇ ಕಂತು) ದಲ್ಲಿ 50 ಕೋಟಿ ರೂಗಳನ್ನು ಒದಗಿಸಲಾಗಿದ್ದು, ಲೆಕ್ಕಶೀರ್ಷಿಕೆ 2852–08–201–0–07 (ಯೋಜನೆ) ಕಬ್ಬು ಬೆಳೆಗಾರ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ವಿಶೇಷ ನೆರವು 106 ಸಹಾಯಧನ ಅಡಿಯಲ್ಲಿ ಬಿಡುಗಡೆಗೆ ಮಂಜೂರು ಮಾಡಲಾಗಿದೆ. ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಈ ಹಣವನ್ನು ಸರ್ಕಾರದ ಆದೇಶ ದಿನಾಂಕ: 13–6–07ರಲ್ಲಿ ವಿಧಿಸಲಾಗಿರುವ ನಿಬಂಧನೆ ಮತ್ತು ಮಾರ್ಗಸೂಚಿಗಳನ್ವಯ ಪರಿಶೀಲಿಸಿ, ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಮೂಲಕ ಸಂಬಂಧಿಸಿದ ಕಾರ್ಖಾನೆಗಳಿಗೆ ಮತ್ತು ರೈತರಿಗೆ ಬಿಡುಗಡೆ ಮಾಡಲು ಕ್ರಮವಹಿಸತಕ್ಕದು.

ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು ಮತ್ತು ಸಂಬಂಧಿಸಿದ ಜಿಲ್ಲಾಧಿಕಾರಿಗಳು ಬಿಡುಗಡೆಯಾದ ಹಣ ಸಂಕಷ್ಟಕ್ಕೊಳಗಾದ ರೈತರಿಗೆ ಮತ್ತು ಸಕ್ಕರೆ ಕಾರ್ಖಾನೆಗಳಿಗೆ ವಿತರಿಸಲು ಕ್ರಮವಹಿಸತಕ್ಕದು. ವಿತರಿಸಲಾದ ಹಣದ ವಿವರವನ್ನು ಆಯುಕ್ತರು ಕಬ್ಬು ಅಭಿವೃದ್ಧಿರವರು ಜಿಲ್ಲಾಧಿಕಾರಿಗಳಿಂದ ಪಡೆದು ಸರ್ಕಾರಕ್ಕೆ ವರದಿ ಮಾಡುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 988 ವೆಚ್ಚ–1/2007 ದಿ: 18/21–8–07ರಂದು ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಆನಂದ್‌ಕುಮಾರ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಸರ್ಕಾರದ ಆದೇಶ ಸಂಖ್ಯೆ: ಸಿಐ 58 ಎಸ್‌ಜಿಎಫ್ 07 (ಭಾ–2) ದಿನಾಂಕ: 12–9–07ಕ್ಕೆ ಸಂಬಂಧಿಸಿದ ಅನುಬಂಧ

ರೈತರಿಗೆ ಮತ್ತು ಕಾರ್ಖಾನೆಗಳಿಗೆ 50 ಕಿ.ಮೀ. ಹೊರಗಿನಿಂದ ಸರಬರಾಜು ಮಾಡಿಕೊಂಡ ಕಬ್ಬಿಗೆ ಸಾಗಾಣಿಕೆ ಸಹಾಯಧನ

| ಕ್ರ.ಸ. | ಸಕ್ಕರೆ ಕಾರ್ಖಾನೆಯ ಹೆಸರು | ಸಾಗಾಣಿಕೆ ಸಹಾಯಧನ (ಪ್ರತಿ ಟನ್‌ಗೆ ಪ್ರತಿ ಕಿ.ಮೀ.ಗೆ 2 ರೂ.ನಂತೆ) (ರೂಗಳಲ್ಲಿ) | ಸಾಗಾಣಿಕೆ ಸಹಾಯಧನ ಹಂಚಿಕೆ ರೈತರಿಗೆ / ಕಾರ್ಖಾನೆಗಳಿಗೆ | ಸಂಬಂಧಿಸಿದ ಜಿಲ್ಲಾಧಿಕಾರಿ |
|---|---|---|---|---|
| 1 | ಭಾಗ್ಯಲಕ್ಷ್ಮಿ ಸಸಕಾ, ಬೆಳಗಾಂ | 8,545/– | ಕಾರ್ಖಾನೆಗೆ | ಬೆಳಗಾಂ |
| 2 | ವಿಶ್ವನಾಥ್ ಶುಗರ್ಸ್, ಬೆಳಗಾಂ | 22,454/– | ಕಾರ್ಖಾನೆಗೆ | ಬೆಳಗಾಂ |
| 3 | ಸೋಮೇಶ್ವರ ಸಸಕಾ, ಬೆಳಗಾಂ | 3,64,000/– | ಕಾರ್ಖಾನೆಗೆ | ಬೆಳಗಾಂ |
| 4 | ಕೃಷ್ಣ ಸಸಕಾ, ಬೆಳಗಾಂ | 9,62,000/– | ಕಾರ್ಖಾನೆಗೆ | ಬೆಳಗಾಂ |
| 5 | ಉಗಾರ್ ಶುಗರ್ಸ್, ಬೆಳಗಾಂ | 35,33,604/– | ರೈತರಿಗೆ | ಬೆಳಗಾಂ |
| | | 81,679/– | ಕಾರ್ಖಾನೆಗೆ | ಬೆಳಗಾಂ |
| 6 | ಮಲಪ್ರಭಾ ಶುಗರ್ಸ್, ಬೆಳಗಾಂ | 1,37,000/– | ಕಾರ್ಖಾನೆಗೆ | ಬೆಳಗಾಂ |
| 7 | ಅಥಣಿ ಫಾರ್ಮರ್ಸ್ ಶುಗರ್ಸ್, ಬೆಳಗಾಂ | 38,36,000/– | ರೈತರಿಗೆ | ಬೆಳಗಾಂ |
| 8 | ರೇಣುಕಾ ಶುಗರ್ಸ್, ಕೊಕಟನೂರ್, ಬೆಳಗಾಂ | 25,36,000/– | ರೈತರಿಗೆ | ಬೆಳಗಾಂ |
| 9 | ಗೋದಾವರಿ ಶುಗರ್ಸ್, ಬಾಗಲಕೋಟೆ | 9,84,000/– | ಕಾರ್ಖಾನೆಗೆ | ಬಾಗಲಕೋಟೆ |
| 10 | ಜಮಖಂಡಿ ಶುಗರ್ಸ್, ಬಾಗಲಕೋಟೆ | 47,51,000/ | ಕಾರ್ಖಾನೆಗೆ | ಬಾಗಲಕೋಟೆ |
| 11 | ಜೆಮ್ ಶುಗರ್ಸ್, ಬಾಗಲಕೋಟೆ | 25,85,000/– | ಕಾರ್ಖಾನೆಗೆ | ಬಾಗಲಕೋಟೆ |
| 12 | ಬೀಳಗಿ ಶುಗರ್ಸ್, ಬಾಗಲಕೋಟೆ | 42,16,000/– | ಕಾರ್ಖಾನೆಗೆ | ಬಾಗಲಕೋಟೆ |
| 13 | ಪ್ರಭುಲಿಂಗೇಶ್ವರ ಶುಗರ್ಸ್, ಬಾಗಲಕೋಟೆ | 27,80,000/– | ಕಾರ್ಖಾನೆಗೆ | ಬಾಗಲಕೋಟೆ |
| 14 | ರೈತರ ಸಸಕಾ, ಬಾಗಲಕೋಟೆ | 8,98,000/– | ಕಾರ್ಖಾನೆಗೆ | ಬಾಗಲಕೋಟೆ |
| 15 | ಎಸ್.ಸಿ.ಎಂ. ಶುಗರ್ಸ್ ಮಂಡ್ಯ | 32,438/– | ಕಾರ್ಖಾನೆಗೆ | ಮಂಡ್ಯ |
| | | 1,08,781/– | ರೈತರಿಗೆ | ಮಂಡ್ಯ |
| 16 | ಐ.ಸಿ.ಎಲ್. ಶುಗರ್ಸ್, ಮಂಡ್ಯ | 77,979/– | ಕಾರ್ಖಾನೆಗೆ | ಮಂಡ್ಯ |
| 17 | ಚಾಮುಂಡೇಶ್ವರಿ ಶುಗರ್ಸ್, ಮಂಡ್ಯ, | 1,50,000/– | ಕಾರ್ಖಾನೆಗೆ | ಮಂಡ್ಯ |
| 18 | ನಂದಿ ಸಸಕಾ, ಬಿಜಾಪುರ | 10,52,000/– | ರೈತರಿಗೆ | ಬಿಜಾಪುರ |
| | | 5,99,000/– | ಕಾರ್ಖಾನೆಗೆ | ಬಿಜಾಪುರ |
| 19 | ರೇಣುಕಾ ಶುಗರ್ಸ್, ಹವಳಗಾ, ಗುಲ್ಬರ್ಗಾ | 2,46,000/– | ರೈತರಿಗೆ | ಗುಲ್ಬರ್ಗಾ |
| 20 | ರೇಣುಕಾ ಶುಗರ್ಸ್, ಆಳಂದ, ಗುಲ್ಬರ್ಗಾ | 6,10,000/– | ರೈತರಿಗೆ | ಗುಲ್ಬರ್ಗಾ |
| 21 | ಸಿರಗುಪ್ಪ ಶುಗರ್ಸ್, ಬಳ್ಳಾರಿ | 4,38,000/– | ಕಾರ್ಖಾನೆಗೆ | ಬಳ್ಳಾರಿ |
| | **ಒಟ್ಟು** | **ರೂ. 3,10,09.480/–** | | |

ರೈತರಿಗೆ ಪ್ರತಿ ಹೆಕ್ಟೇರ್‌ಗೆ ನೀಡಬೇಕಾದ 25,000/– ರೂಗಳ ಪರಿಹಾರಧನ ಜಿಲ್ಲಾಧಿಕಾರಿಗಳಿಗೆ

| ಕ್ರ.ಸ. | ಜಿಲ್ಲೆ | ಮೊತ್ತ (ರೂಗಳಲ್ಲಿ) |
|---|---|---|
| 1 | ಜಿಲ್ಲಾಧಿಕಾರಿ, ಗುಲ್ಬರ್ಗಾ | 13,62,00,000 |
| 2 | ಜಿಲ್ಲಾಧಿಕಾರಿ, ಬೀದರ್ | 1,54,41,100 |
| 3 | ಜಿಲ್ಲಾಧಿಕಾರಿ, ಬಿಜಾಪುರ | 2,38,04,750 |
| 4 | ಜಿಲ್ಲಾಧಿಕಾರಿ, ಬೆಳಗಾವಿ | 1,55,90,000 |
| 5 | ಜಿಲ್ಲಾಧಿಕಾರಿ, ಬಳ್ಳಾರಿ | 32,93,700 |
| | **ಒಟ್ಟು** | **ರೂ. 19,43,29,550** |

**ಪಿ. ಆನಂದಕುಮಾರ್**

ಪಿ.ಆರ್.1671

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಬ್ಯಾಟರಾಯನಪುರದಲ್ಲಿ ಸಹ ಖಾಸಗಿ ಸಹಭಾಗಿತ್ವದಲ್ಲಿ (Public Private Parternship) ನಿರ್ಮಿಸಲಾಗುವ ಆಧುನಿಕ ಮಾರುಕಟ್ಟೆ ಸಂಕೀರ್ಣದ ಬಗ್ಗೆ ಕರೆಯಲಾದ ಟೆಂಡರನ್ನು ಮೌಲ್ಯಮಾಪನ ಮಾಡಲು "Bid Evaluation Committee" ಯನ್ನು ರಚಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ/ಮಾಅಯೊ/ಮುಅ/ 5165/2007–08, ದಿನಾಂಕ: 16–8–2007.

**ಪ್ರಸ್ತಾವನೆ :**

ಉಲ್ಲೇಖದಲ್ಲಿ ಓದಲಾಗಿರುವ ಪತ್ರ ದಿನಾಂಕ: 16–8–2007ರಲ್ಲಿ ಆಯುಕ್ತರು, ಕೃಷಿ ಮಾರಾಟ ಇಲಾಖೆ ಇವರು ಬೆಂಗಳೂರು ಜಿಲ್ಲೆಯ ಬ್ಯಾಟರಾಯನಪುರ ಜಮೀನಿನಲ್ಲಿ ಖಾಸಗಿ ಸಹಭಾಗಿತ್ವದಡಿಯಲ್ಲಿ (Public Private Parternship) ಆಧುನಿಕ ಮಾರುಕಟ್ಟೆ ಸಂಕೀರ್ಣವನ್ನು ನಿರ್ಮಿಸಲು ಯೋಜಿಸಲಾಗಿದ್ದು ಇದಕ್ಕಾಗಿ ಆಸಕ್ತ ಬಿಡ್ಡುದಾರರಿಂದ ಅರ್ಜಿಯನ್ನು ಆಹ್ವಾನಿಸಿ ಟೆಂಡರನ್ನು ಕರೆಯಲಾಗಿತ್ತು. ಅದರನ್ವಯ ಟೆಂಡರನ್ನು ಸಲ್ಲಿಸಲು ದಿನಾಂಕ: 17–8–2007 ಕೊನೆಯ ದಿನವಾಗಿರುತ್ತದೆ.

ಆಸಕ್ತ ಬಿಡ್ಡುದಾರರಿಂದ ಸ್ವೀಕರಿಸಲಾಗುವ ಟೆಂಡರುಗಳನ್ನು ಸ್ವತಂತ್ರ ಏಜೆನ್ಸಿ ಮೂಲಕ ಮೌಲ್ಯಮಾಪನವನ್ನು ಮಾಡಿಸಲು ಉದ್ದೇಶಿಸಿ ದಿನಾಂಕ: 20–7–2007ರಂದು ಸರ್ಕಾರದ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನಿರ್ಣಹಿಸಿದಂತೆ ಇಂಡಿಯನ್ ಇನ್ಸಿಟ್ಯೂಟ್ ಆಫ್ ಸೈನ್ಸ್ ಸಂಸ್ಥೆಯೊಂದಿಗೆ ಸಮಾಲೋಚಿಸಿದ ನಂತರ ಈ ಕೆಳಕಂಡ ಸದಸ್ಯರನ್ನೊಳಗೊಂಡ "Bid Evaluation Committee" ಯನ್ನು ರಚಿಸಲು ತೀರ್ಮಾನಿಸಿದೆ.

| | | |
|---|---|---|
| 1. | ಪ್ರೊ: ಬಿ.ವಿ. ವೆಂಕಟರಮಣ ರೆಡ್ಡಿ, ಅಸೋಷಿಯೇಟ್ ಪ್ರೊಫೆಸರ್, ಡಿಪಾರ್ಟ್‌ಮೆಂಟ್ ಆಫ್ ಸಿವಿಲ್ ಇಂಜಿನಿಯರಿಂಗ್, ಇಂಡಿಯನ್ ಇನ್ಸಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು | ಸದಸ್ಯರು |
| 2 | ಡಾ: ಮೊಂಟೊಮನಿ, ಆರ್ಕಿಟೆಕ್, ಅಸೋಷಿಯೇಟ್ ಪ್ರೊಫೆಸರ್, ಅಸೋಷಿಯೇಟ್ ಪ್ರೊಫೆಸರ್, ಸೆಂಟರ್ ಫಾರ್ ಸಸ್ ಟೈನೇಬಲ್ ಟೆಕ್‌ನಾಲಜೀಸ್, ಇಂಡಿಯನ್ ಇನ್ಸಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು | ಸದಸ್ಯರು |
| 3 | ವೈಸ್ ಚಾನ್ಸಲರ್ ಆಫ್ ಯೂನಿವರ್ಸಿಟಿ ಆಫ್ ಅಗ್ರಿಕಲ್ಚರಲ್ ಸೈನ್ಸ್, ಯೂನಿವರ್ಸಿಟಿ ಆಫ್ ಅಗ್ರಿಕಲ್ಚರಲ್ ಸೈನ್ಸ್, ಬೆಂಗಳೂರು | ಸದಸ್ಯರು |
| 4 | ಕಾರ್ಯದರ್ಶಿ, ಹಣ್ಣು ಮತ್ತು ತರಕಾರಿಗಳ ವಿಶೇಷ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬೆಂಗಳೂರು | ಸಮಾವೇಶಕ |

ಅದರಂತೆ ಈ ಕೆಳಕಂಡ ಆದೇಶ:

**ಸರ್ಕಾರಿ ಆದೇಶ ಸಂಖ್ಯೆ: ಸಇ 577 ಎಂಆರ್ಇ 2005(ಭಾ), ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2007.**

ಪ್ರಸ್ತಾವನೆಯಲ್ಲಿ ಹೇಳಿರುವ ಅಂಶಗಳನ್ನು ಪರಿಶೀಲಿಸಿದ ನಂತರ ಸರ್ಕಾರವು ಬೆಂಗಳೂರಿನ ಬ್ಯಾಟರಾಯನಪುರದಲ್ಲಿ ಸಹ ಖಾಸಗಿ ಸಹಭಾಗಿತ್ವದಲ್ಲಿ (Public Private Parternship) ನಿರ್ಮಿಸಲಾಗುವ ಆಧುನಿಕ ಮಾರುಕಟ್ಟೆ ಸಂಕೀರ್ಣದ ಬಗ್ಗೆ ಕರೆಯಲಾದ ಟೆಂಡರನ್ನು ಮೌಲ್ಯಮಾಪನ ಮಾಡಲು ಈ ಕೆಳಕಂಡ ಸದಸ್ಯರನೊಳಗೊಂಡ "Bid Evaluation Committee" ಯನ್ನು ರಚಿಸಲಾಗಿದೆ.

| | | |
|---|---|---|
| 1. | ಪ್ರೊ: ಬಿ.ವಿ. ವೆಂಕಟರಮಣ ರೆಡ್ಡಿ, ಅಸೋಷಿಯೇಟ್ ಪ್ರೊಫೆಸರ್, ಡಿಪಾರ್ಟ್‌ಮೆಂಟ್ ಆಫ್ ಸಿವಿಲ್ ಇಂಜಿನಿಯರಿಂಗ್, ಇಂಡಿಯನ್ ಇನ್ಸಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು | ಸದಸ್ಯರು |
| 2 | ಡಾ: ಮೊಂಟೊಮನಿ, ಆರ್ಕಿಟೆಕ್, ಸೋಷಿಯೇಟ್ ಪ್ರೊಫೆಸರ್, ಅಸೋಷಿಯೇಟ್ ಪ್ರೊಫೆಸರ್, ಸೆಂಟರ್ ಫಾರ್ ಸಸ್‌ಟೈನೇಬಲ್ ಟೆಕ್‌ನಾಲಜೀಸ್, ಇಂಡಿಯನ್ ಇನ್ಸಿಟ್ಯೂಟ್ ಆಫ್ ಸೈನ್ಸ್, ಬೆಂಗಳೂರು | ಸದಸ್ಯರು |
| 3 | ವೈಸ್ ಚಾನ್ಸಲರ್ ಆಫ್ ಯೂನಿವರ್ಸಿಟಿ ಆಫ್ ಅಗ್ರಿಕಲ್ಚರಲ್ ಸೈನ್ಸ್, ಯೂನಿವರ್ಸಿಟಿ ಆಫ್ ಅಗ್ರಿಕಲ್ಚರಲ್ ಸೈನ್ಸ್, ಬೆಂಗಳೂರು | ಸದಸ್ಯರು |

| | | |
|---|---|---|
| 4 | ಕಾರ್ಯದರ್ಶಿ,<br>ಹಣ್ಣು ಮತ್ತು ತರಕಾರಿಗಳ ವಿಶೇಷ, ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ,<br>ಬೆಂಗಳೂರು | ಸಮಾವೇಶಕ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1672

**ಸಿ.ಕೆ. ವಾಸುದೇವ ಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಹಕಾರ ಇಲಾಖೆ

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ :** ಶ್ರೀ ಸೈಯದ್ ರಹಮತುಲ್ಲಾ, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ಕರ್ತವ್ಯಲೋಪದ ಸಂಬಂಧ ಇಲಾಖಾ ವಿಚಾರಣೆ ಕುರಿತು ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ವಾಕೈ 28 ಕೈಸೇವಿ 2006, ದಿ: 17–3–2006.
2. ಅಪರ ನಿಬಂಧಕರು, ವಿಚಾರಣೆ–4, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ವಿಚಾರಣಾ ವರದಿ ದಿ: 27–6–2007.
3. ಉಪ ಲೋಕಾಯುಕ್ತ, ಕರ್ನಾಟಕ ರಾಜ್ಯ, ಬೆಂಗಳೂರು, ಇವರ ಪತ್ರ ಸಂ: ಎಲ್‌ಒಕೆ/ಎಆರ್‌ಇ –4/ಇಎನ್‌ಕ್ಯೂ/01/2006–07, ದಿ: 3–8–2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಶ್ರೀ ಸೈಯದ್ ರಹಮತುಲ್ಲಾ, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಹಿಂದೆ ತಾಲ್ಲೂಕು ಕೈಗಾರಿಕಾ ಕೇಂದ್ರ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಕರ್ತವ್ಯ ಲೋಪ ಎಸಗಿರುವುದು ಕಂಡು ಬಂದಿರುವುದರಿಂದ, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11ರಡಿ ಇಲಾಖಾ ವಿಚಾರಣೆ ನಡೆಸಲು ಪ್ರಕರಣವನ್ನು ಕೆ.ಸಿ.ಎಸ್. (ಸಿಸಿಎ) ನಿಯಮಾವಳಿಗಳು 1957ರ ನಿಯಮ 14(ಎ)ರ ಅನ್ವಯ ಮಾನ್ಯ ಉಪ ಲೋಕಾಯುಕ್ತ ಕರ್ನಾಟಕ, ಬೆಂಗಳೂರು, ಇವರಿಗೆ ವಹಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿ: 27–6–2007ರ ಪತ್ರದಲ್ಲಿ ವಿಚಾರಣಾಧಿಕಾರಿಗಳು ಶ್ರೀ ಸೈಯದ್ ರಹಮತುಲ್ಲಾ, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪೂರ್ಣಗೊಳಿಸಿ ವರದಿಯನ್ನು ಮಾನ್ಯ ಉಪ ಲೋಕಾಯುಕ್ತ, ಇವರಿಗೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಮಾನ್ಯ ಉಪ ಲೋಕಾಯುಕ್ತರವರ ಪತ್ರದಲ್ಲಿ ವಿಚಾರಣಾಧಿಕಾರಿಗಳು ದಿ: 27–6–2007ರಂದು ಸಲ್ಲಿಸಿದ ವಿಚಾರಣಾ ವರದಿಯನ್ನು ಪರಿಶೀಲಿಸಿ ಹಾಗೂ ಆರೋಪಿತ ಅಧಿಕಾರಿಯವರ ಮೇಲಿನ ಆರೋಪಗಳು ಸಾಬೀತಾಗಿರುವುದಿಲ್ಲ ಎಂಬ ವಿಚಾರಣಾಧಿಕಾರಿಗಳ ಅಭಿಪ್ರಾಯವನ್ನು ಒಪ್ಪಿ ಹಾಗೂ ಸದರಿ ಆರೋಪಿತ ಅಧಿಕಾರಿಯವರ ವಿರುದ್ಧ ಮುಂದೆ ಕೈಗೊಳ್ಳಬೇಕಾಗಿರುವ ಕ್ರಮಗಳನ್ನು ಕೈಬಿಡುವಂತೆ ಹಾಗೂ ಕೈಗೊಂಡ ಕ್ರಮಗಳ ಬಗ್ಗೆ ಮಾಹಿತಿಯನ್ನು ತಿಳಿಸುವಂತೆ ಸರ್ಕಾರವನ್ನು ಕೋರಿದ್ದಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದೆ ಹಾಗೂ ಮಾನ್ಯ ಉಪ ಲೋಕಾಯುಕ್ತ ಇವರ ವರದಿಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 28 ಕೈಸೇವಿ 2006, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ಶ್ರೀ ಸೈಯದ್ ರಹಮತುಲ್ಲಾ, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಇವರು ಈ ಹಿಂದೆ ತಾಲ್ಲೂಕು ಕೈಗಾರಿಕಾ ಕೇಂದ್ರ, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಎಸಗಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಮಾನ್ಯ ಉಪ ಲೋಕಾಯುಕ್ತ ಇವರಿಗೆ ವಹಿಸಲಾಗಿತ್ತು. ಮಾನ್ಯ ಉಪ ಲೋಕಾಯುಕ್ತರವರು ವಿಚಾರಣಾಧಿಕಾರಿಗಳಿಂದ ವರದಿ ಪಡೆದು ಆರೋಪಿತ ಅಧಿಕಾರಿಯ ಮೇಲಿನ ಆರೋಪಗಳು ಯಾವುದೂ ಸಾಬೀತಾಗಿಲ್ಲ ಎಂಬ ಅಂಶವನ್ನು ಸರ್ಕಾರಕ್ಕೆ ತಿಳಿಸಿದ್ದು ಹಾಗೂ ಆ ವರದಿಯನ್ನು ಸರ್ಕಾರವು ಒಪ್ಪಿಕೊಂಡಿದೆ.

ಆದ್ದರಿಂದ, ಶ್ರೀ ಸೈಯದ್ ರಹಮತುಲ್ಲಾ, ಕೈಗಾರಿಕಾ ಉತ್ತೇಜನಾಧಿಕಾರಿ, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಈ ಅಧಿಕಾರಿಯವರ ಮೇಲಿನ ಆರೋಪಗಳ ದೋಷಮುಕ್ತರನ್ನಾಗಿ ಪರಿಗಣಿಸಿ ಆದೇಶ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1673

**ಎಲ್.ಎಸ್. ವಾಸನ್**

ಸರ್ಕಾರದ ಅಧೀನ ಕಾರ್ಯದರ್ಶಿ,

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ (ಸೇವೆಗಳು)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಗುತ್ತಿಗೆ ಉಪನ್ಯಾಸಕರ ಸಂಚಿತ ವೇತನ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 400 ಪಿಟಿಡಿ 2006, ದಿನಾಂಕ: 31–1–2007.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 23 ಪಿಟಿಡಿ 2007, ದಿನಾಂಕ: 13–3–2007.
3. ನಿರ್ದೇಶಕರು, ಆಯುಷ್ ನಿರ್ದೇಶನಾಲಯ, ಬೆಂಗಳೂರು ಇವರ ಪತ್ರ ಸಂಖ್ಯೆ: ಆಯುಷ್/02/ ಸಿಬ್ಬಂದಿ(1) 2007–08, ದಿನಾಂಕ: 31–7–2007.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ: (1) ಮತ್ತು (2)ರ ಸರ್ಕಾರದ ಅಧಿಸೂಚನೆಗಳಲ್ಲಿ, ಆಯುಷ್ ಇಲಾಖೆಯ ಸರ್ಕಾರಿ ಆಯುರ್ವೇದ / ಯುನಾನಿ / ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ ಹಾಗೂ ಸರ್ಕಾರಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಕಾಲೇಜುಗಳಿಗೆ ಮಾಸಿಕ ರೂ. 7990/– ರಂತೆ ಗುತ್ತಿಗೆ ಉಪನ್ಯಾಸಕರುಗಳನ್ನು ಸರ್ಕಾರವು ನೇಮಿಸಿದೆ.

ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ, ಸರ್ಕಾರದ ಆದೇಶ ಸಂಖ್ಯೆ: ಆಕುಕ 659 ಹೆಚ್ಎಸ್ಹೆಚ್ 2004, ದಿನಾಂಕ: 3–3–2005ರಲ್ಲಿ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಕೆಲಸ ನಿರ್ವಹಿಸುತ್ತಿರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳಿಗೆ ಮಾಹೆಯಾನ ರೂ. 11,000/– ಸಂಚಿತ ವೇತನವನ್ನು ಹಾಗೂ ತಜ್ಞ ವೈದ್ಯರಿಗೆ ಮಾಹೆಯಾನ ರೂ. 13,000/– ಸಂಚಿತ ವೇತನವನ್ನು ನೀಡಲು ಆದೇಶಿಸಲಾಗಿದೆ.

ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು / ಮೈಸೂರು / ಬಳ್ಳಾರಿ, ಸರ್ಕಾರಿ ಯುನಾನಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು, ಸರ್ಕಾರಿ ಹೋಮಿಯೋಪತಿ ವೈದ್ಯಕೀಯ ಮಹಾವಿದ್ಯಾಲಯ, ಬೆಂಗಳೂರು ಹಾಗೂ ಸರ್ಕಾರಿ ಪ್ರಕೃತಿ ಚಿಕಿತ್ಸೆ ಮತ್ತು ಯೋಗ ಕಾಲೇಜು, ಮೈಸೂರು ಇಲ್ಲಿ ಒಟ್ಟು 63 ಗುತ್ತಿಗೆ ಉಪನ್ಯಾಸಕರು ಕೆಲಸ ನಿರ್ವಹಿಸುತ್ತಿದ್ದಾರೆ.

2007–08ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2210–05–101–1–03 ಸರ್ಕಾರಿ ಆಯುರ್ವೇದ ವೈದ್ಯಕೀಯ ಮಹಾವಿದ್ಯಾಲಯಗಳು ಯೋಜನೇತರ, 002 ಅಧಿಕಾರಿಗಳ ವೇತನ, 003 ಸಿಬ್ಬಂದಿ ವೇತನ, 011 ತುಟ್ಟಿ ಭತ್ಯೆ, 014 ಇತರೆ ಭತ್ಯೆ ಅಡಿಯಲ್ಲಿ ರೂ. 438.43 ಲಕ್ಷ ಆಯವ್ಯಯವನ್ನು ನಿಗದಿಪಡಿಸಿದ್ದು, ಅದರಲ್ಲಿ ಪ್ರಸಕ್ತ ಸಾಲಿನಲ್ಲಿ ಹೊಸ ವೇತನ ಶ್ರೇಣಿ ಹಾಗೂ ಸಂಸ್ಥೆಗಳ ಬೇಡಿಕೆ ಅನುಸಾರ ಒಟ್ಟಾರೆ ರೂ. 400.00 ಲಕ್ಷಗಳು ಸಾಕಾಗಲಿದ್ದು, ಅದರಲ್ಲಿ ರೂ. 38.43 ಲಕ್ಷ ಉಳಿತಾಯವಾಗುವ ಸಂಭವವಿರುವುದರಿಂದ ಈ ಲೆಕ್ಕಶೀರ್ಷಿಕೆಯಲ್ಲಿ ಉಳಿತಾಯವಾಗುವ ಮೇಲ್ಕಂಡ ಆಯವ್ಯಯದಲ್ಲಿ ರೂ. 37.88 ಲಕ್ಷಗಳ ವೆಚ್ಚವನ್ನು ಭರಿಸಲಾಗುತ್ತದೆ.

ಆದ್ದರಿಂದ, ಆಯುಷ್ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ಕೆಲಸ ನಿರ್ವಹಿಸುತ್ತಿರುವ ಬೋಧಕರಿಗೆ ರೂ. 7990/– ರಿಂದ ರೂ. 13,000/– ಕ್ಕೆ ಸಂಚಿತ ವೇತನ ಹೆಚ್ಚಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 177 ಪಿಟಿಡಿ 2007, ಬೆಂಗಳೂರು, ದಿನಾಂಕ: 7ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ, ಆಯುಷ್ ಇಲಾಖೆಯ ಸ್ನಾತಕೋತ್ತರ ಗುತ್ತಿಗೆ ಉಪನ್ಯಾಸಕರಿಗೆ ರೂ. 7990/– ರಿಂದ ರೂ. 13,000/– ಕ್ಕೆ ಸಂಚಿತ ವೇತನವನ್ನು ಹೆಚ್ಚಿಸಲು ಹಾಗೂ ಇದಕ್ಕೆ ತಗಲುವ ವೆಚ್ಚ ರೂ. 37.88 ಲಕ್ಷ (ಮೂವತ್ತೇಳು ಲಕ್ಷದ ಎಂಬತ್ತೆಂಟು ಸಾವಿರ ರೂಪಾಯಿಗಳು ಮಾತ್ರ) ಹೆಚ್ಚುವರಿ ವೆಚ್ಚವನ್ನು ಲೆಕ್ಕಶೀರ್ಷಿಕೆ 2210–05–101–1–03, 002, 003, 011, 014 ಅಡಿ ಒದಗಿಸಲಾದ ರೂ. 438.43 ಲಕ್ಷಗಳ (ನಾಲ್ಕು ಕೋಟಿ ಮೂವತ್ತೆಂಟು ಲಕ್ಷದ ನಲವತ್ತ ಮೂರು ಸಾವಿರ ರೂಪಾಯಿಗಳು ಮಾತ್ರ) ಪರಿಮಿತಿಯಲ್ಲಿಯೇ ಭರಿಸುವ ಮತ್ತು ಆದೇಶವಾದ ದಿನಾಂಕದಿಂದ ಪಾವತಿಸುವ ಷರತ್ತಿಗೊಳಪಟ್ಟು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/1652/ವೆಚ್ಚ–5/2007, ದಿನಾಂಕ: 17–8–2007ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1674

**ಎನ್. ಮಹಾಲಕ್ಷ್ಮಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

## FOREST, ENVIRONMENT AND ECOLOGY SECRETARIAT

**Sub :** JBIC Phase II – Karnataka Sustainable Forest Management & Bio-diversity Conservation Project –Sanction of backlog work of the year 2005-06 & 2006-07.

**Read :** 1. G.O. No. FEE 279 FAP 2003, dated: 23-5-2005.

2. G.O. No. FEE 162 FAP 2005, dated: 12-9-2005.
3. G.O. No. FEE 97 FAP 2006, dated: 19-7-2006.
4. Letter No. D1/BUD/CR-52/2007-08, dated 4-7-2007 & 13/14-8-2007 from the Principal Chief Conservator of Forests Bangalore.

**Preamble:**

In G.O. referred at (1) above, Karnataka Sustainable Forest Management & Bio-diversity Conservation Project has been approved for implementation from 2005-06 to 2012-2013 with a total outlay of Rs. 745.00 crores in the State over a period of 8 years with certain conditions.

In G.O. referred at (2) above, sanction has been accorded to Annual Plan Operation for the year 2005-06 with an outlay Rs. 77.20 crores under the JBIC Phase II – Assisted Karnataka Sustainable Forest Management & Bio-diversity Conservation Project.

In G.O. reffered at (3) above, sanction has been accorded for Annual Plan Operations of the year 2006-07 with an outlay Rs. 108.70 crores and also backlog works of 2005-06 amounting to Rs. 16.483 crores under the JBIC Phase II – Assisted Karnataka Sustainable Forest Management & Bio-diversity Conservation Project.

In the letter referred at (4) above, the Principal Chief Conservator of Forests has informed that the Empowered Committee has in its 4th meeting held on 28-4-2007 approved the backlog works of the year 2005-06 & 2006-07 under the project for the year 2007-08 amounting Rs. 12.543 crores and Rs. 10.680 crores respectively and has sought issue of Government Order in this regard.

The proposal has been examined and the Government has decided to approve execution of the backlog works of the year 2005-06 & 2006-07 under the Project during the year 2007-08 amounting to Rs. 12.543 crores and Rs. 10.680 crores respectively. Hence the order.

**Government Order No. FEE 135 FAP 2007, Bangalore, Dated 11th September 2007**

In the circumstances explained above, sanction is hereby accorded for executing the backlog works of the year 2005-06 & 2006-07 under the JBIC Phase II –Karnataka Sustainable Forest Management & Bio-diversity Conservation Project during the year 2007-08 amounting to Rs. 12.543 crores and Rs. 10.680 crores respectively as follows:

**Annexure-1**

**Backlog works of 2005-06 proposed for execution during 2007-08**

| Sl.No. | Component | Amount (Rs. In Crores) |
|---|---|---|
| i | Afforestation | 0.995 |
| a | Farm Forestry | 0.423 |
| b | Soil Conservation and Water Harvesting Measures | 2.509 |
| ii | Protected Area Management & Bio-diversity Conservation | 0.985 |
| iii | Joint Forest Planning & Management | 0.345 |
| iv | Support Activities for Forest Management Working Plan, Research, Training and Consultancy | 5.907 |
| v | Basic Infrastructure support for field work vehicles, Computers, Vehicles and Buildings, Telephones | 1.379 |
| | **Total** | **12.543** |

**Annexure-2**

**Backlog works of 2006-07 proposed for execution during 2007-08**

| Sl.No. | Component | Amount (Rs. In Crores) |
|---|---|---|
| i | Afforestation | 2.249 |
| a | Farm Forestry | 0.834 |

| | | |
|---|---|---|
| b | Soil Conservation and Water Harvesting Measures | 0.160 |
| ii | Protected Area Management & Bio-diversity Conservation | 0.365 |
| iii | Joint Forest Planning & Management | 0.257 |
| iv | Support Activities for Forest Management Working Plan, Research, Training and Consultancy | 3.989 |
| v | Basic Infrastructure support for field work vehicles, Computers, Vehicles and Buildings, Telephones | 1.211 |
| vi | RMOE | 1.615 |
| | **Total** | **10.680** |

This order is in accordance with the decisions taken in the 4th meeting of the Empowered Committee held on 28-4-2007.

By order and in the name of the Governor of Karnataka,

PR. 1675

**H.M. MALLIKARJUNA SWAMY**

Under Secretary to Government,

Forest, Environment and Ecology Department.

**INFRASTRUCTURE DEVELOPMENT SECRETARIAT**

**Sub :** Release of GoK's share towards cost sharing works –Shimoga –Talaguppa Gauge Conversion project –reg.

**Read :** 1. G.O. No. IDD 52 NSW 2007 dated 24-7-2007.

2. Letter No. W.352/CN/BNC/iDeCK dated 21-8-2007, of CAO, SWR, Bangalore.

**Preamble:**

In the Government Order dated 24-7-2007 read at Sl.No. (1) above, an amount of Rs. 20.00 crores was sanctioned towards the share of State Government for the Shimoga-Talaguppa gauge conversion railway project with the condition of having an MoU with Railways for sharing this project, on 50:50 cost sharing basis and getting matching share from the Ministry of Railways.

2. In letter read at Sl.No. (2) above, SWR have clarified that the Railways have not entered into MoU for cost sharable work for other cost sharing Railway projects. The Government Order issued by Government of Karnataka for sharing of cost for a project and confirmation of acceptance of the same by Railways has been taken as accepted document in lieu of MoU. Since, the G.O. has already been issued and the same has been accepted by the Ministry of Railways, SWR has requested to release necessary funds.

3. The question of deleting the condition relating to MoU from the Government Order referred to at (1) above has been examined by the Government and the following orders are issued.

**Government Order No. IDD 52 NSW 2007, Bangalore, Dated 19th September 2007**

In the circumstances mentioned above and in partial modification of the orders issued vide G.O. dated 24-7-2007, the Government hereby orders deletion of the condition specified in G.O. dated 24-7-2007 regarding entering into an MoU with Railways for sharing the project cost on 50:50 basis.

2. This order issues with the concurrence of FD vide its U.O. No. FD 1409 Exp-I/2007 dated 13-9-2007.

By order and in the name of the Governor of Karnataka,

PR. 1676

**N. MANJULA GEETHA**

Under Secretary to Government,

Infrastructure Development Department.

ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ :** ಶ್ರೀ ಕೆ. ಆನಂದಮೂರ್ತಿ, ನಿವೃತ್ತ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, ಇವರ ವಿರುದ್ಧ ಶಿಸ್ತು ಕ್ರಮವನ್ನು ಕೈಬಿಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆನಾಸ 94 ಆಇಸೇ 2002, ದಿನಾಂಕ: 30–4–2002.
2. ಶ್ರೀ ಕೆ. ಆನಂದಮೂರ್ತಿರವರ ಸಮಜಾಯಿಷಿ ಹೇಳಿಕೆ ದಿನಾಂಕ: 27–5–2002.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ತಿಳುವಳಿಕೆ ಪತ್ರದಲ್ಲಿ ಶ್ರೀ ಕೆ. ಆನಂದಮೂರ್ತಿ, ಹಿಂದಿನ ಉಪನಿರ್ದೇಶಕರು (ನಿವೃತ್ತ) ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು ಇಲ್ಲಿ 1996 ರಿಂದ 1998ರ ಅವಧಿಯಲ್ಲಿ ಸಾರ್ವಜನಿಕ ವಿತರಣೆಗೆ ಜಿಲ್ಲೆಗೆ ಹಂಚಿಕೆಯಾದ ಪಡಿತರ ಪದಾರ್ಥಗಳ ಹಂಚಿಕೆಯ ಬಗ್ಗೆ ಪಡಿತರ ಚೀಟಿಗಳ ಸಂಖ್ಯೆ ಹಾಗೂ ನಿಗದಿತ ವಿತರಣಾ ಪ್ರಮಾಣಕ್ಕನುಗುಣವಾಗಿ ಸಗಟು ಮಳಿಗೆವಾರು/ ನ್ಯಾಯಬೆಲೆ ಅಂಗಡಿವಾರು ಮರುಹಂಚಿಕೆ ಮಾಡುವ ಕರ್ತವ್ಯದಲ್ಲಿ ಲೋಪವೆಸಗಿ ಇದಕ್ಕೆ ಮೀಸಲಾದ ಪಡಿತರ ಪದಾರ್ಥಗಳ ದುರುಪಯೋಗವಾಗಲು ಕಾರಣರಾಗಿರುವುದರಿಂದ, ಇವರ ಮೇಲೆ ಶಿಸ್ತು ಕ್ರಮ ಕೈಗೊಳ್ಳಲು ದಿನಾಂಕ: 3–5–2002ರಂದು ತಿಳುವಳಿಕೆ ಪತ್ರವನ್ನು ಜಾರಿ ಮಾಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಕೆ. ಆನಂದಮೂರ್ತಿ, ಅವರು ದಿನಾಂಕ: 30–4–1998ರಂದು ಸೇವೆಯಿಂದ ನಿವೃತ್ತರಾಗಿದ್ದು, ನಿವೃತ್ತಿ ಹೊಂದಿ 4 ವರ್ಷಗಳ ನಂತರ ಇಲಾಖಾ ವಿಚಾರಣೆ ನಡೆಸಲು, ತಿಳುವಳಿಕೆ ಪತ್ರವನ್ನು ಜಾರಿ ಮಾಡಲು ನಿಯಮದಲ್ಲಿ ಅವಕಾಶವಿಲ್ಲವೆಂದು ಸಮಜಾಯಿಷಿ ನೀಡಿರುತ್ತಾರೆ. ಅಲ್ಲದೆ ಅವರ ವಿರುದ್ಧ ಮಾಡಲಾದ ಎಲ್ಲಾ ಆರೋಪಗಳನ್ನು ನಿರಾಕರಿಸಿ, ಸದರಿ ತಿಳುವಳಿಕೆ ಪತ್ರವನ್ನು ಹಿಂದಕ್ಕೆ ಪಡೆಯಬೇಕಾಗಿ ಕೋರಿದ್ದಾರೆ.

ಈ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯವನ್ನು ಕೋರಲಾಗಿದ್ದು ಅವರು ಈ ಕೆಳಕಂಡಂತೆ ಅಭಿಪ್ರಾಯ ನೀಡಿರುತ್ತಾರೆ.

> **"Departmental inquiry after retirement :** When the rule authorized the competent authority to institute disciplinary proceedings against a civil servant after retirement in respect of an event which took place within a period of four years prior to the date of his retirement and within a period of four years after the date of retirement, no inquiry can be instituted either in respect of an event which took place prior to four years prior to retirement or even in respect of an event which took place after the expiry of four years after retirement. The inquiry must be deemed to have commenced on the date on which the charge sheet is served on the concerned retired civil servant. If by the time the charge sheet is served, the period of four years expired, the institution of inquiry is without authority of law."

ಕಾನೂನು ಇಲಾಖೆಯ ಅಭಿಪ್ರಾಯದಂತೆ ಶ್ರೀ ಆನಂದಮೂರ್ತಿಯವರ ವಿರುದ್ಧ ಶಿಸ್ತಿನ ಕ್ರಮ ಮುಂದುವರಿಸಲು ಸಾಧ್ಯವಾಗದೇ ಇರುವ ಕಾರಣ ಶಿಸ್ತಿನ ಕ್ರಮ ಕೈಬಿಡಲು ಒಪ್ಪುವುದು ಅನಿವಾರ್ಯವಾಗಿರುವುದರಿಂದ ಹಾಗೂ ಈ ನಿವೃತ್ತ ಅಧಿಕಾರಿಯು ನೀಡಿರುವ ಸಮಜಾಯಿಷಿಯನ್ನು ಪರಿಗಣಿಸಿ ಇವರ ವಿರುದ್ಧ ಪ್ರಸ್ತಾಪಿಸಲಾಗಿರುವ ಶಿಸ್ತು ಕ್ರಮವನ್ನು ಕೈಬಿಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆನಾಸ 94 ಆಇಸೇ 2002, ಬೆಂಗಳೂರು, ದಿನಾಂಕ: 28ನೇ ಮೇ 2007.**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳಿಂದಾಗಿ ಶ್ರೀ ಕೆ. ಆನಂದಮೂರ್ತಿ, ನಿವೃತ್ತ ಉಪ ನಿರ್ದೇಶಕರು, ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ ಇವರ ವಿರುದ್ಧ ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳ ನಿಯಮ 214 ಹಾಗೂ ಕೆ.ಸಿ.ಎಸ್. (ಸಿಸಿಎ) ನಿಯಮ 11ರ ಮೇರೆಗೆ ಹೂಡಲಾದ ಇಲಾಖಾ ವಿಚಾರಣೆಯ ಮುಂದಿನ ಕ್ರಮವನ್ನು ಕೈಬಿಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1015

**ಎ.ಎಸ್. ವಿಶ್ವೇಶ್ವರಯ್ಯ**
ಪೀಠಾಧಿಕಾರಿ,
ಆಹಾರ–1 ಶಾಖೆ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ

ಇಂಧನ ಸಚಿವಾಲಯ

**ವಿಷಯ :** ಮೆ: ಸಿದ್ಧಿ ಶ್ರೀ ಶಿವೆ ಪವರ್ಸ್ ಲಿಮಿಟೆಡ್ ಕಂಪನಿಯ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು 1.2 ಮೆಗಾ ವ್ಯಾಟ್‌ಗೆ ಸೀಮಿತಗೊಳಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 383 ಎನ್‌ಸಿಇ 2006, ದಿನಾಂಕ: 22–9–2006.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಸಂಕುಂದಿ/2006/800, ದಿನಾಂಕ: 2/7–4–2007.

**ಪ್ರಸ್ತಾವನೆ :**

ಓದಲಾದ (1)ರ ಆದೇಶದಲ್ಲಿ ಮೆ: ಸಿದ್ಧಿ ಶ್ರೀ ಶಿವೆ ಪವರ್ಸ್ ಲಿಮಿಟೆಡ್ ಕಂಪನಿಯವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಬೈಂದೂರು ಪಟ್ಟಣದ ಶೀರೂರು ಗ್ರಾಮದ ಬಳಿ ಕಾಳಿಗುಂಡಿಯಿಂದ 50 ಮೀಟರ್ ಕೆಳ ತೊರೆಯಲ್ಲಿ ಸಂಕುಂದಿ (ಸಂಕದಗುಂಡಿ) ತೊರೆಯಲ್ಲಿ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಸಿದ್ಧಿ ಶ್ರೀ ಶಿವೆ ಪವರ್ಸ್ ಲಿಮಿಟೆಡ್ ಕಂಪನಿಯ ಅಭಿವೃದ್ಧಿದಾರರ ಕೋರಿಕೆಯ ಮೇರೆಗೆ ಯೋಜನಾ ಸ್ಥಳದಲ್ಲಿ 1.2 ಮೆಗಾ ವ್ಯಾಟ್ ಸಾಮರ್ಥ್ಯದ ವಿದ್ಯುತ್‌ನ್ನು ಉತ್ಪಾದಿಸಲು ಸಾಧ್ಯವೆಂದು ತಿಳಿಸಿ ಸಾಮರ್ಥ್ಯವನ್ನು 3.00 ಮೆಗಾ ವ್ಯಾಟ್‌ನಿಂದ 1.2 ಮೆಗಾ ವ್ಯಾಟ್‌ಗೆ ಸೀಮಿತಗೊಳಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 383 ಎನ್‌ಸಿಇ 2006, ಬೆಂಗಳೂರು, ದಿನಾಂಕ: 8ನೇ ಮೇ 2007.**

ಸರ್ಕಾರವು ಮೆ: ಸಿದ್ಧಿ ಶ್ರೀ ಶಿವೆ ಪವರ್ಸ್ ಲಿಮಿಟೆಡ್ ಕಂಪನಿಯವರಿಗೆ ಮಂಡ್ಯ ಜಿಲ್ಲೆಯ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಬೈಂದೂರು ಪಟ್ಟಣದ ಶೀರೂರು ಗ್ರಾಮದ ಬಳಿ ಕಾಳಿಗುಂಡಿಯಿಂದ 50 ಮೀಟರ್ ಕೆಳ ತೊರೆಯಲ್ಲಿ ಸಂಕುಂದಿ (ಸಂಕದಗುಂಡಿ) ತೊರೆಯಲ್ಲಿ ಹಂಚಿಕೆ ಮಾಡಲಾಗಿರುವ 3.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 1.2 ಮೆಗಾ ವ್ಯಾಟ್‌ಗೆ ಸೀಮಿತಗೊಳಿಸಿ ಅನುಷ್ಠಾನ ಮಾಡಲು ಅನುಮತಿ ನೀಡಿದೆ.

ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್.1051

## LABOUR SECRETARIAT

**Sub :** Constitution of Institute Management Committees to Government Industrial Training Institutes upgrades as C.O.E.

**Read :** 1. Letter No. DGET-35(4)(1)/2006-CPIU/WB dated: 4-2-2006.
2. Letter No. DET/Trg/COE-02/CR-02/2006-07, dated: 30-3-2007.

**Preamble:**

The Ministry of Labour, Government of India in Letter read at (1) above had requested to constitute Institute Management Committee in Government Industrial Training Institutes, which are upgraded as C.O.E.

The Commissioner, Employment and Training in his letter read at (2) above has proposed representatives to constitute institute Management Committees for Government Industrial Training Institute, Raichur, Mangalore, Bijapur, Dhavanagere, Bhadravathi and Bellary.

After examining the matter in detail Government have decided to constitute Institute Management Committees in respect of Government Industrial Training Institute, Raichur, Mangalore, Bijapur, Dhavanagere, Bhadravathi and hence this order.

**Government Order No. LD 81 ETI 2007, Bangalore, Dated 26th May 2007**

The Institute Management Committees to the Government Industrial Training Institutes mentioned below comprising the members shown against each institute in constituted with immediate effect for a period of two years.

| Sl. No. | Name of the Industrial Training Institute | | Representatives | Designation |
|---|---|---|---|---|
| 1 | Government ITI, Raichur | 1 | Sri Muralidhar Rao, Executive Director (Thermal), Thermal Power Station, Shakthi Nagar, Raichur | Chairman |

| Sl. No. | Name of the Industrial Training Institute | | Representatives | Designation |
|---|---|---|---|---|
| | | 2 | Principal, Government ITI, Raichur, | Convenor |
| | | 3 | Representative from M/s Mysore Power Co. Ltd., Raichur | Member |
| | | 4 | One Representative from Management of M/s Karnataka Power Co., Ltd., Raichur | Member |
| | | 5 | One Representative from KSRTC Workshop, Raichur | Member |
| | | 6 | One Representative from Management of M/s Paras Plastic Industries, Raichur | Member |
| | | 7 | Joint Director, Divisional Office, Gulbarga | Member |
| | | 8 | Joint Director, District Industrial and Commerce, Raichur | Member |
| | | 9 | District Employment Officer, Raichur | Member |
| | | 10 | Principal Government Polytechnic | Member |
| | | 11 | Training Officer, Government ITI, Raichur | Member |
| | | 12 | Student Representative, Government ITI Raichur | Member |
| 2 | Government ITI, Mangalore | 1 | Sri John Prasad Minezes, President, M/s. Kanara Chambers of Industrial & Commerce, Mangalore | Chairman |
| | | 2 | Principal, Government ITI, Mangalore (M) | Convenor |
| | | 3 | One Representative from Management of M/s M.R.P.L. Kuthethur, Mangalore | Member |
| | | 4 | One Representative from Management of M/s. N.M.P.T., Panambur, Mangalore. | Member |
| | | 5 | One Representative from Management of M/s Hindustan Lever Ltd., Mangalore | Member |
| | | 6 | One Representative from Management of M/s Mandovi Motors Ltd., Mangalore | Member |
| | | 7 | One Representative from Management of M/s Bharath Motors Ltd., Kuntikan, Mangalore | Member |
| | | 8 | Joint Director, Divisional Office, Mysore | Member |
| | | 9 | Joint Director, Industrial and Commerce, Mangalore Dist | Member |
| | | 10 | District Employment Officer, Mangalore | Member |
| | | 11 | Training Officer, Government ITI, Mangalore (M) | Member |
| | | 12 | Student Representative, Government ITI, Mangalore (M) | Member |
| 3 | Government ITI, Bijapur | 1 | Sri S.S. Biradar, President, Bijapur Dist. Small Scale Inds. Association, Bijapur | Chairman |
| | | 2 | Principal, Govt I.T.I. Bijapur | Convenor |

| Sl. No. | Name of the Industrial Training Institute | | Representatives | Designation |
|---|---|---|---|---|
| | | 3 | One Representative from Management of M/s. TEKNOMATICS Pvt. Ltd., Industrial Area Bijapur | Member |
| | | 4 | One Representative from Management fo M/s NWKSRTC Bijapur Division, Bijapur | Member |
| | | 5 | One Representative from Management of M/s Karnataka Power Transmission Corporation Ltd., Bijapur | Member |
| | | 6 | One Representative from Management of M/s Power Generation Station, Alamatti Damsite, Bijapur Dist. | Member |
| | | 7 | One Representation from Management of M/s Nandi Co-operative Sugar Factory, Galgali, Bagalkot | Member |
| | | 8 | Joint Director (Trg), Department of Employment & Training Divisional Office, Hubli | Member |
| | | 9 | Joint Director District Industrial and Commerce, Bijapur | Member |
| | | 10 | District Employment Officer, Bijapur | Member |
| | | 11 | Training Officer, Government I.T.I. Bijapur | Member |
| | | 12 | Student Representative, Government I.T.I. Bijapur | Member |
| 4 | Government ITI, Davanagere | 1 | Sri K.S. Jagannath, Vice President (HRM), M/s Grasim Industries Ltd., Kumar Pattanam, Near Harihara, Haveri | Chairman |
| | | 2 | Principal Government ITI, Davanagere | Convenor |
| | | 3 | One Representative from Management of M/s Mallikarjuna Tempo Force, Davanagere-2 | Member |
| | | 4 | One Representative from Management of M/s Shruthi Motors Pvt. Ltd., Davanagere-2 | Member |
| | | 5 | One Representative from Management of M/s UBDT Engineering College, Davanagere | Member |
| | | 6 | Principal Govt. D.R.R. Polytechnic, Davanagere | Member |
| | | 7 | Joint Director (Trg), Divisional Office, Bangalore | Member |
| | | 8 | Joint Director, District Industries & Commerce, Davanagere | Member |
| | | 9 | Dist. Employment Officer, Davanagere | Member |

| Sl. No. | Name of the Industrial Training Institute | | Representatives | Designation |
|---|---|---|---|---|
| | | 10 | Training Officer Government ITI, Davanagere | Member |
| | | 11 | Student Representative, Government ITI, Davanagere | Member |
| 5 | Government ITI, Bhadravathi | 1 | Sri N.C. Aagasi Bagilu, DGM, M/s. Mysore Paper Mills Ltd., Bhadravathi | Chairman |
| | | 2 | Principal, Govt ITI, Bhadravathi | Convenor |
| | | 3 | One Representative from Chamber of Inds and Commerce, Shimoga | Member |
| | | 4 | One Representative from Management of M/s. Blast Furnace (Ele) VISP, Bhadravathi | Member |
| | | 5 | One Representative from Management of M/s. M.P.M. Bhadravathi | Member |
| | | 6 | One Representative from Management of M/s Paper Packaging Pvt. Ltd., Shimoga | Member |
| | | 7 | One Representative from Management of M/s Parathna Industries, Machenahalli, Shimoga | Member |
| | | 8 | Joint Director, Divisional Office, Bangalore | Member |
| | | 9 | Joint Director, Industrial and Commerce, Shimoga | Member |
| | | 10 | District Employment Officer, Bhadravathi | Member |
| | | 11 | Training Officer, Govt ITI, Bhadravathi | Member |
| | | 12 | Student Representative, Govt ITI, Bhadravathi | Member |

The role and responsibilities of IMCs is as under:

1. Generation of revenue through various means such as projects from Industry and to use these funds as decided by them.
2. Forecast of new emerging training areas.
3. Development of curriculum
4. Selection of trainees.
5. Training of Trainers.
6. Appointment of Contract faculty/ Guest faculty.
7. On the job training.
8. Testing and Certification.
9. Placement of trainees passing out.

The institute management committee shall meet once in two months.

By order and in the name of the Governor of Karnataka,

PR. 1079

**V. SREERAMAREDDY**
Desk Officer,
Labour Department.
(Employment and Training)

**ಆರ್ಥಿಕ ಸಚಿವಾಲಯ**

**ವಿಷಯ :** ಇಲಾಖಾ ಮುಖ್ಯಸ್ಥರಿಗೆ ಮೊಬೈಲ್ ದೂರವಾಣಿ ಸೌಲಭ್ಯವನ್ನು ಒದಗಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಆಇ 2 ಬಿಇಎಂ 1998, ದಿನಾಂಕ: 5-11-1998. ಮತ್ತು ಇದೇ ಸಮಸಂಖ್ಯೆಯ ತಿದ್ದೋಲೆ ದಿನಾಂಕ: 16-8-2000.

2. ಅಧಿಕೃತ ಜ್ಞಾಪನ ಸಂಖ್ಯೆ ಆಇ 1 ಬಿಇಎಂ 1999, ದಿನಾಂಕ: 9-3-1999.
3. ಸರ್ಕಾರದ ಆದೇಶ ಸಂಖ್ಯೆ: ಆಇ 3 ಬಿಇಎಂ 2001, ದಿನಾಂಕ: 17-10-2001.
4. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30(ಎ) ಡಿಟಿಎನ್ 2003, ದಿನಾಂಕ: 26-5-2003.
5. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 30 ಡಿಟಿಎನ್ 2003, ದಿನಾಂಕ: 12-8-2003.

**ಪ್ರಸ್ತಾವನೆ :**

ಉಲ್ಲೇಖ (1)ರಲ್ಲಿ ಓದಲಾದ ಆದೇಶದಲ್ಲಿ ಸರ್ಕಾರದ ಅಧಿಕಾರಿಗಳ ಕಛೇರಿ ಮತ್ತು ನಿವಾಸಕ್ಕೆ ದೂರವಾಣಿಗಳನ್ನು ಒದಗಿಸುವ ಬಗ್ಗೆ ಮಾರ್ಗಸೂಚಿಗಳನ್ನು ನೀಡಲಾಗಿದೆ. ಉಲ್ಲೇಖ (2)ರ ಅಧಿಕೃತ ಜ್ಞಾಪನದಲ್ಲಿ ಅರ್ಹತೆ ಮತ್ತು ಅಗತ್ಯತೆಯ ಆಧಾರದ ಮೇಲೆ ಮೊಬೈಲ್ ದೂರವಾಣಿಗಳನ್ನು ಒದಗಿಸುವ ಬಗ್ಗೆ ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯುವಂತೆ ತಿಳಿಸಲಾಗಿದೆ. ಉಲ್ಲೇಖ (3)ರ ಆದೇಶದಲ್ಲಿ ಮುಂದಿನ ಆದೇಶದವರೆಗೆ ಮೊಬೈಲ್ ದೂರವಾಣಿಗಳನ್ನು ನೀಡತಕ್ಕದ್ದಲ್ಲ ಎಂದು ತಿಳಿಸಲಾಗಿದೆ. ಉಲ್ಲೇಖ (4) ಮತ್ತು (5)ರಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಸರ್ಕಾರದ ಕಾರ್ಯದರ್ಶಿಗಳು ಮತ್ತು ಮೇಲ್ಪಟ್ಟ ಅಧಿಕಾರಿಗಳಿಗೆ ಮೊಬೈಲ್ ದೂರವಾಣಿಗಳನ್ನು ಒದಗಿಸುವ ಬಗ್ಗೆ ಆದೇಶ ಹೊರಡಿಸಿದೆ.

ಇಲಾಖಾ ಮುಖ್ಯಸ್ಥರುಗಳಿಗೆ ಮೊಬೈಲ್ ದೂರವಾಣಿ ಸೌಲಭ್ಯವನ್ನು ಒದಗಿಸುವ ಬಗ್ಗೆ ಬಹಳಷ್ಟು ಪ್ರಸ್ತಾವನೆಗಳು ಆರ್ಥಿಕ ಇಲಾಖೆಯಲ್ಲಿ ಸ್ವೀಕೃತವಾಗಿದ್ದು, ಮೊಬೈಲ್ ದೂರವಾಣಿಯ ಅಗತ್ಯತೆಯನ್ನು ಮನಗಂಡ ಸರ್ಕಾರವು ಇಲಾಖಾ ಮುಖ್ಯಸ್ಥರುಗಳಿಗೆ ಈ ಸೌಲಭ್ಯವನ್ನು ಒದಗಿಸುವ ಬಗ್ಗೆ ಪರಿಶೀಲಿಸಿದ್ದು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 2 ಬಿಇಎಂ 2007, ಬೆಂಗಳೂರು, ದಿನಾಂಕ: 14ನೇ ಜೂನ್ 2007.**

ಇಲಾಖಾ ಮುಖ್ಯಸ್ಥರಿಗೆ ಮೊಬೈಲ್ ದೂರವಾಣಿ ಸೌಲಭ್ಯವನ್ನು ಕೆಳಗಿನ ಷರತ್ತುಗಳಿಗೆ ಒಳಪಟ್ಟು ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಒದಗಿಸಲು ಈ ಮೂಲಕ ಮಂಜೂರಾತಿ ನೀಡಲಾಗಿದೆ:

1. ಇಲಾಖಾ ಮುಖ್ಯಸ್ಥರುಗಳ ಮೊಬೈಲ್ ದೂರವಾಣಿ ಉಪಕರಣದ ಖರೀದಿಗೆ 5,000-00 ರೂಪಾಯಿಗಳ ಗರಿಷ್ಠ ಮಿತಿಯನ್ನು ವಿಧಿಸಲಾಗಿದೆ.
2. ಇಲಾಖಾ ಮುಖ್ಯಸ್ಥರುಗಳ ಮೊಬೈಲ್ ದೂರವಾಣಿಗೆ ಮಾಸಿಕ 1500-00 ರೂಪಾಯಿ ವೆಚ್ಚದ ಕರೆಗಳ ಮಿತಿಯನ್ನು ವಿಧಿಸಲಾಗಿದೆ.
3. ಮೊಬೈಲ್ ಉಪಕರಣದ ಖರೀದಿಗಾಗಿ ಹೆಚ್ಚುವರಿ ಅನುದಾನವನ್ನು ಕೋರುವಂತಿಲ್ಲ. ಈ ವೆಚ್ಚವನ್ನು ಇಲಾಖೆಗಳು ತಮ್ಮ ಇಲಾಖೆಗಳಿಗೆ ನಿಗದಿಪಡಿಸಿರುವ ಆಯವ್ಯಯದಲ್ಲೇ ಭರಿಸುವುದು. ಮೊಬೈಲ್ ದೂರವಾಣಿ ಕರೆಗಳ ವೆಚ್ಚಗಳನ್ನು ಈಗ ಹಾಲಿ ಇರುವ ದೂರವಾಣಿ ಕರೆಗಳಿಗೆ ನಿಗದಿಪಡಿಸಿರುವ ವೆಚ್ಚವನ್ನು ಮಿತಿಗೊಳಿಸುವ ಮೂಲಕ ಭರಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1111

**ದರ್ಪಣ್ ಜೈನ್**

ಸರ್ಕಾರದ ಉಪ ಕಾರ್ಯದರ್ಶಿ,

(ಆಯವ್ಯಯ ಮತ್ತು ಸಂಪನ್ಮೂಲ) ಆರ್ಥಿಕ ಇಲಾಖೆ

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಉಪನಿರ್ದೇಶಕರ ಕಛೇರಿ ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಮೈಸೂರು ಇಲ್ಲಿನ ಕಛೇರಿ ಅಧೀಕ್ಷಕರ ಹುದ್ದೆಯನ್ನು ದಿ: 1-4-2007ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವ ಬಗ್ಗೆ.

**ಓದಲಾಗಿದೆ:** 1 ಸರ್ಕಾರದ ಆದೇಶ ಸಂಖ್ಯೆ: ಸಂಕಇ 60 ಕೆಎಂಯು 2006, ದಿ: 12-7-2006.

2. ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಆಪ್ರಾಸಂಪಇ/ಇಎಸ್‌ಟಿ/2006-07, ದಿನಾಂಕ: 2-2-2007.

**ಪ್ರಸ್ತಾವನೆ :**

ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಮೈಸೂರು ಉಪನಿರ್ದೇಶಕರ ಕಛೇರಿಯಲ್ಲಿ ಒಂದು ಕಛೇರಿ ಅಧೀಕ್ಷಕರ ಹುದ್ದೆಯನ್ನು ಸರ್ಕಾರದ ಆದೇಶ ಸಂಖ್ಯೆ: ಸಂಕಇ 69 ಸ್ವೀಮರ, 2005 ದಿನಾಂಕ : 27-7-2005ರಲ್ಲಿ ಸೃಜಿಸಲಾಗಿತ್ತು. ಹಾಗೂ ಮೇಲೆ (1)ರಲ್ಲಿ ಓದಲಾದ ದಿನಾಂಕ: 12-7-2006ರ ಸರ್ಕಾರದ ಆದೇಶದಲ್ಲಿ ಸದರಿ ಹುದ್ದೆಯನ್ನು

ದಿನಾಂಕ: 1–4–2006 ರಿಂದ 31–3–2007ರವರೆಗೆ ಮುಂದುವರಿಸಲಾಗಿತ್ತು. ಆಯುಕ್ತರು ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ ಅವರು ಮೇಲೆ (2)ರಲ್ಲಿ ಓದಲಾದ ದಿನಾಂಕ: 2–2–2007ರ ಪತ್ರದಲ್ಲಿ ಆಡಳಿತಾತ್ಮಕ ಹಿತದೃಷ್ಟಿಯಿಂದ ಸದರಿ ಹುದ್ದೆಯನ್ನು ದಿನಾಂಕ: 1–4–2007ರಿಂದ ಒಂದು ವರ್ಷದ ಅವಧಿಗೆ ಮುಂದುವರಿಸುವಂತೆ ಕೋರಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 70 ಕೆಎಂಯು 2007, ಬೆಂಗಳೂರು, ದಿನಾಂಕ: 12ನೇ ಜೂನ್ 2007.**

ಪ್ರಾಚ್ಯವಸ್ತು ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ ಮೈಸೂರು ಉಪನಿರ್ದೇಶಕರ ಕಛೇರಿಯಲ್ಲಿರುವ ಒಂದು ಕಛೇರಿ ಅಧೀಕ್ಷಕರ ಹುದ್ದೆಯನ್ನು ದಿನಾಂಕ: 1–4–2007 ರಿಂದ 31–3–2007ರವರೆಗೆ ಮುಂದುವರೆಸಲಾಗಿದೆ. ಈ ಸಂಬಂಧ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–21 (ಯೋಜನೆ) ಇದರಲ್ಲಿ ಭರಿಸತಕ್ಕದ್ದು.

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ಆಂತರೀಕ ಆರ್ಥಿಕ ಸಲಹೆಗಾರರ ಸಹಮತಿಯನ್ನು ಅ.ಟಿ. ಸಂಖ್ಯೆ: ಇಡಿ 332 ಐಎಫ್ (ಬಿಎ) 2007 ದಿನಾಂಕ: 11–4–2007ರಲ್ಲಿ ಪಡೆದು ಹಾಗೂ ಆರ್ಥಿಕ ಇಲಾಖೆ ಆದೇಶ ಸಂಖ್ಯೆ: ಎಫ್‌ಡಿ 1 ಟಿಪಿಎಫ್ 1996 ದಿನಾಂಕ: 10–7–1996ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರದತ್ತವಾದ ಪ್ರತ್ಯಾಯೋಜನೆಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1143

**ಎಂ.ಎಸ್. ಶಿವರಾಮ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ**

**ವಿಷಯ :** ಡಾ: ಎಸ್. ಕಾರ್ತಿಕ್, ಅನ್ಯಪರ ಉಪನ್ಯಾಸಕರು, ಇಎನ್‌ಟಿ, ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ ಇವರ ಸೇವೆಯನ್ನು ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:** 1 ದಿನಾಂಕ 23–8–2005ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆ ಸಂಖ್ಯೆ: ಎಸ್‌ಆರ್‌ಓ (2) 45/05–06.

2. ದಿನಾಂಕ: 20–10–2005ರ ಆದೇಶ ಸಂಖ್ಯೆ: ಆಕುಕ 2 ಎಂಸಿಎಲ್ 2005.

3. ದಿನಾಂಕ: 4–7–2006ರ ಅಧಿಸೂಚನೆ ಸಂಖ್ಯೆ: ಆಕುಕ 385 ಹೆಚ್‌ಎಸ್‌ಹೆಚ್ 2006.

**ಪ್ರಸ್ತಾವನೆ :**

1) ಮೇಲೆ (1)ರಲ್ಲಿ ಓದಲಾದ ಪ್ರಸ್ತಾವನೆಯಲ್ಲಿ ವೈದ್ಯಕೀಯ ಶಿಕ್ಷಣ ನಿರ್ದೇಶಕರು, ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಅನ್ಯಸೇವಾ ಉಪನ್ಯಾಸಕರನ್ನು ಸದರಿ ಇಲಾಖೆಯಲ್ಲಿ ವಿಲೀನಗೊಳಿಸಲು ಪ್ರಸ್ತಾಪಿಸಿರುತ್ತಾರೆ. ಅದರಂತೆ ದಿನಾಂಕ: 20–10–2005ರ ಆದೇಶದಲ್ಲಿ ಹಲವು ವೈದ್ಯರುಗಳನ್ನು ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ವಿಲೀನಗೊಳಿಸಲಾಗಿದೆ.

2) ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪ್ರಸ್ತಾವನೆಯಲ್ಲಿ ಸಲ್ಲಿಸಿದ್ದ ವೈದ್ಯರ ಪಟ್ಟಿಯ ಕ್ರಮ ಸಂಖ್ಯೆ: 25 ರಲ್ಲಿನ ಅನ್ಯಸೇವೆ ಮೇಲೆ ಉಪನ್ಯಾಸಕರಾಗಿ ಕರ್ತವ್ಯ ನಿರ್ವಹಿಸುತ್ತಿರುವ ಡಾ: ಎಸ್. ಕಾರ್ತಿಕ್, ಇ.ಎನ್.ಟಿ., ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರು ಆ ಸಂದರ್ಭದಲ್ಲಿ ಖಾಯಂ ಪೂರ್ವ ಸೇವಾವಧಿ ಮುಗಿಸಿಲ್ಲದ ಕಾರಣ ಅವರನ್ನು ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ ವಿಲೀನಗೊಳಿಸಿರಲಿಲ್ಲ. ಸದರಿ ವೈದ್ಯರು ಮೇಲೆ ಕ್ರಮ ಸಂಖ್ಯೆ: 3ರ ಅಧಿಸೂಚನೆಯನ್ವಯ ಖಾಯಂ ಪೂರ್ವ ಸೇವಾವಧಿಯನ್ನು ಪೂರ್ಣಗೊಳಿಸಿರುವುದಾಗಿ ಘೋಷಿಸಲಾಗಿದೆ.

ಮೇಲಿನ ಎಲ್ಲ ಅಂಶಗಳನ್ನು ಪರಿಶೀಲಿಸಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 2 ಎಂಸಿಎಲ್ 2005 (ಭಾ), ಬೆಂಗಳೂರು, ದಿನಾಂಕ: 15ನೇ ಜೂನ್ 2007.**

3) ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಡಾ: ಎಸ್. ಕಾರ್ತಿಕ್ ಅನ್ಯಪರ ಉಪನ್ಯಾಸಕರು, ಇ.ಎನ್.ಟಿ., ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೆಂಗಳೂರು ಇವರ ಸೇವೆಯನ್ನು ವೈದ್ಯಕೀಯ ಶಿಕ್ಷಣ ಇಲಾಖೆಯಲ್ಲಿ 1977ರ ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿಯ 16(ಎ) (ii)ನೇ ನಿಯಮವನ್ನು ಸಡಿಲಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ವಿಲೀನಗೊಳಿಸಲಾಗಿದೆ. ಸದರಿ ವಿಲೀನವು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಿರುತ್ತದೆ.

1) ವರ್ಗಾವಣೆ ಮೂಲಕ ಉಪನ್ಯಾಸಕರ ವೃಂದ ಹುದ್ದೆಯಲ್ಲಿ ವಿಲೀನಗೊಂಡು ಅವರ ಜೇಷ್ಠತೆಯನ್ನು ಈಗ ಹಾಲಿ ಉಪನ್ಯಾಸಕರ ಜೇಷ್ಠತಾ ಪಟ್ಟಿಯ ಕೆಳಭಾಗದಲ್ಲಿ ನಿಗದಿಪಡಿಸುವುದು.

2) ಈ ಆದೇಶದ ಪ್ರಕಾರ ಯಾವ ವಿಷಯದ ಉಪನ್ಯಾಸಕರ ವೃಂದ ಹುದ್ದೆಗೆ ವರ್ಗಾವಣೆ ಮೂಲಕ ವಿಲೀನಗೊಳಿಸಲಾಗಿದೆಯೋ ಅದೇ ವೃಂದ ಹುದ್ದೆಯಲ್ಲಿ ಶಾಶ್ವತವಾಗಿ ಜೇಷ್ಠತೆಯನ್ನು ನಿರ್ಧರಿಸತಕ್ಕದ್ದು.

3) ವೈದ್ಯಕೀಯ ಶಿಕ್ಷಣ ಇಲಾಖೆಗೆ ವರ್ಗಾವಣೆಯಾದ ಸದರಿ ಉಪನ್ಯಾಸಕರ ವೇತನವನ್ನು 8000–13500 ರೂ.ಗಳ ಎ.ಐ.ಸಿ.ಟಿ.ಇ. ವೇತನ ಶ್ರೇಣಿಯಲ್ಲಿ ನಿಗದಿಗೊಳಿಸತಕ್ಕದ್ದು. ಅವರುಗಳ ವೇತನವನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿ 13ನೇ ನಿಯಮದಡಿ ನಿರ್ಬಂಧಗೊಳಿಸತಕ್ಕದ್ದು. ಅವರುಗಳು ಈಗಾಗಲೇ ಪಡೆದಿರುವ ಕಾಲಮಿತಿ ವೇತನ ಬಡ್ತಿ ಸೌಲಭ್ಯಗಳನ್ನು ವೈಯಕ್ತಿಕ ಸೌಲಭ್ಯವೆಂದು ಪರಿಗಣಿಸತಕ್ಕದ್ದು. ಅಂತಹ ಸೌಲಭ್ಯವನ್ನು ಒಂದು ಬಾರಿ ಪಡೆದಿದ್ದು ಅದನ್ನು ವೈಯಕ್ತಿಕ ಸೌಲಭ್ಯವೆಂದು ಪರಿಗಣಿಸತಕ್ಕದ್ದು. ಕಾಲಮಿತಿ ವೇತನ ಬಡ್ತಿ ಸೌಲಭ್ಯವನ್ನು ಪಡೆಯಲು ಅವಕಾಶವಿರುವುದರಿಂದ ವರ್ಗಾವಣೆಗೆ ಅಭಿಮತ ವ್ಯಕ್ತಪಡಿಸಿರುವವರು ಯಾವುದೇ ಅಂತಹ ಕಾಲಬದ್ಧ ಬಡ್ತಿ ಯೋಜನೆಗೆ ವಿಲೀನಗೊಂಡ ನಂತರ ಅರ್ಹರಾಗಿರುವುದಿಲ್ಲ. ಅಭಿಮತ ವ್ಯಕ್ತಪಡಿಸಿರುವವರು ಯಾವುದೇ ಆಯ್ಕೆ, ಭತ್ಯೆ ಇತ್ಯಾದಿಗಳಿಗೆ ಅರ್ಹರಾಗಿರುವುದಿಲ್ಲ.

4) ವರ್ಗಾವಣೆ ಮೂಲಕ ಉಪನ್ಯಾಸಕರ ವೃಂದ ಹುದ್ದೆಗೆ ವಿಲೀನಗೊಂಡಿರುವವರು ಉಪನ್ಯಾಸಕರ ಹುದ್ದೆಯನ್ನು ಪದಗ್ರಹಿಸುವ ಮೊದಲು ಅವರು ಸಂಬಂಧಿತ ವಿಷಯದಲ್ಲಿ ಸ್ನಾತಕೋತ್ತರ ಪದವಿ ವಿದ್ಯಾರ್ಹತೆಯನ್ನು ಪಡೆದಿರುವುದನ್ನು ಸಂಬಂಧಪಟ್ಟ ಪ್ರಾಂಶುಪಾಲರು ವಿಶ್ವವಿದ್ಯಾನಿಲಯದಿಂದ ಪದವಿ ಪ್ರಮಾಣ ಪತ್ರವನ್ನು ಪರಿಶೀಲಿಸಿ ಖಚಿತಪಡಿಸಿಕೊಳ್ಳತಕ್ಕದ್ದು.

5) ವರ್ಗಾವಣೆ ಮೂಲಕ ಯಾವ ಉಪನ್ಯಾಸಕರ ವೃಂದ ಹುದ್ದೆಗಳಿಗೆ ವಿಲೀನಗೊಳಿಸಲಾಗಿದೆಯೋ ಅಂತಹವರು 15 ದಿನಗಳ ಅವಧಿಯಲ್ಲಿ ಅಂತಹ ಉಪನ್ಯಾಸಕರ ಹುದ್ದೆಯನ್ನು ಪದಗ್ರಹಿಸತಕ್ಕದ್ದು. ತಪ್ಪಿದ್ದಲ್ಲಿ ಅವರುಗಳನ್ನು ಅವರ ಮೂಲ ಇಲಾಖೆಗೆ ಮರಳಿಸಲಾಗುವುದು.

4) ದಿನಾಂಕ: 4–6–2005, ಸಂಖ್ಯೆ: ಸಿಆಸುಇ 861 ಸೇನಿಯೋ 2005ರ ಅನಧಿಕೃತ ಟಿಪ್ಪಣಿಯಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಹಾಗೂ ದಿನಾಂಕ: 20–9–2005, ಸಂಖ್ಯೆ: ಆ 1092 ವೆಚ್ಚ–5/2005ರ ಅನಧಿಕೃತ ಟಿಪ್ಪಣಿಯಲ್ಲಿ ಆರ್ಥಿಕ ಇಲಾಖೆಯ ಸಹಮತಿಯನ್ವಯ ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1154

**ಮಾಜ್ ಅಹಮದ್ ಶರೀಫ್**

ಸರ್ಕಾರದ ಜಂಟಿ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
ವೈದ್ಯಕೀಯ ಶಿಕ್ಷಣ

**ಆರ್ಥಿಕ ಸಚಿವಾಲಯ**

**ವಿಷಯ :** ವಿಶೇಷ ಭತ್ಯೆ ಪರಿಷ್ಕರಣೆ ಮತ್ತು ದರಗಳ ತರ್ಕಸಮ್ಮತ ನಿಗದಿ –ಇನ್ನು ಕೆಲವು ಹುದ್ದೆಗಳಿಗೆ ವಿಶೇಷ ಭತ್ಯೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರ ಆದೇಶ ಸಂಖ್ಯೆ: ಆಇ 13 ಎಸ್ಆರ್‌ಪಿ 2000(1) ದಿನಾಂಕ: 9–6–2005.
2. ಸರ್ಕಾರ ಆದೇಶ ಸಂಖ್ಯೆ: ಆಇ 27 ಎಸ್ಆರ್‌ಪಿ 2006, ದಿನಾಂಕ: 21–11–2006.
3. ಸರ್ಕಾರ ಆದೇಶ ಸಂಖ್ಯೆ: ಆಇ 27 ಎಸ್ಆರ್‌ಪಿ 2006, ದಿನಾಂಕ: 5–12–2006.

**ಪ್ರಸ್ತಾವನೆ :**

2005ರ ಅಧಿಕಾರಿ ಸಮಿತಿ ಮಾಡಿದ ಶಿಫಾರಸ್ಸುಗಳ ಹಿನ್ನೆಲೆಯಲ್ಲಿ, ಸರ್ಕಾರದ ಎಲ್ಲಾ ಇಲಾಖೆಗಳ ವಿವಿಧ ವರ್ಗಗಳ ಹುದ್ದೆಗಳಿಗೆ ಮಂಜೂರು ಮಾಡಿದ್ದ ವಿಶೇಷ ಭತ್ಯೆ ಪಾವತಿಗೆ ಸಂಬಂಧಿಸಿದ ವಿಷಯವನ್ನು ಸರ್ಕಾರವು ಪುನರಾವಲೋಕಿಸಿ, ಸರ್ಕಾರದ ಹಲವಾರು ಇಲಾಖೆಗಳಿಂದ ಹೊರಡಿಸಲಾಗಿದ್ದ ಹಿಂದಿನ ಎಲ್ಲಾ ಆದೇಶಗಳನ್ನು ರದ್ದುಪಡಿಸಿ ಉಲ್ಲೇಖ (1)ರಲ್ಲಿ ಓದಲಾದ ದಿನಾಂಕ: 9–6–2005ರ ಆದೇಶದ ಅನುಬಂಧದಲ್ಲಿ ಸೂಚಿಸಲಾಗಿರುವ ಹುದ್ದೆಗಳಿಗೆ ಸದರಿ ಹುದ್ದೆಗಳ ಎದುರು ಸೂಚಿಸಿರುವ ದರಗಳಲ್ಲಿ ವಿಶೇಷ ಭತ್ಯೆಯನ್ನು ದಿನಾಂಕ: 1–6–2005ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿದೆ.

ದಿನಾಂಕ 9–6–2005ರ ಆದೇಶದ 2ನೇ ಕಂಡಿಕೆಯಲ್ಲಿ, ಯಾವ ಪ್ರಕರಣದಲ್ಲಿ ಸರ್ಕಾರದ ನಿರ್ದಿಷ್ಟ ಅನುಮೋದನೆಯೊಂದಿಗೆ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿದೆಯೇ, ಅಂತಹ ಹುದ್ದೆಗಳು ಸದರಿ ಆದೇಶದ ಅನುಬಂಧವು ಒಳಗೊಂಡಿರದೇ ಇದ್ದಲ್ಲಿ, ಅಂತಹ ಪ್ರಕರಣಗಳನ್ನು ಸರ್ಕಾರಕ್ಕೆ, ಮುಂದಿನ ಆದೇಶಕ್ಕಾಗಿ ವರದಿ ಮಾಡಬೇಕೆಂದು ಸೂಚಿಸಲಾಗಿದೆ. ಅದರಂತೆ, ಹಲವು ಆಡಳಿತ ಇಲಾಖೆಗಳು ಇಂತಹ ಪ್ರಕರಣಗಳನ್ನು ಸರ್ಕಾರದ ಗಮನಕ್ಕೆ ತಂದು ವಿಶೇಷ ಭತ್ಯೆಯನ್ನು ಮುಂದುವರೆಸುವಂತೆ ಹಾಗೂ ಕೆಲವು ಆಡಳಿತ ಇಲಾಖೆಗಳು ಹೊಸ ಹುದ್ದೆಗಳಿಗೆ ವಿಶೇಷ ಭತ್ಯೆ ಮಂಜೂರು ಮಾಡಬೇಕೆಂದು ಸಲ್ಲಿಸಿದ್ದ ಕೋರಿಕೆಗಳನ್ನು ಸರ್ಕಾರವು ಪರಿಶೀಲಿಸಿ ದಿನಾಂಕ 9–6–2005ರ ಆದೇಶವನ್ನು

ಭಾಗಶಃ ಮಾರ್ಪಡಿಸಿ, ಉಲ್ಲೇಖ (2) ಮತ್ತು (3) ರಲ್ಲಿ ಓದಲಾದ ದಿನಾಂಕ 21–11–2006 ಮತ್ತು 5–12–2006ರ ಆದೇಶಗಳಲ್ಲಿ ಸರ್ಕಾರವು ಕೆಲವು ಹೊಸ ಹುದ್ದೆಗಳಿಗೆ ವಿಶೇಷ ಭತ್ಯೆಯನ್ನು ಮಂಜೂರು ಮಾಡಿದೆ.

ಪ್ರಸ್ತುತ, ಕಾರ್ಯದರ್ಶಿಗಳು, ಕರ್ನಾಟಕ ವಿಧಾನ ಪರಿಷತ್ತು, ಇವರು ಉಲ್ಲೇಖ (2)ರಲ್ಲಿ ಓದಲಾದ ದಿನಾಂಕ 21–11–2006ರ ಆದೇಶದಲ್ಲಿ ತಿದ್ದುಪಡಿ ಮಾಡಿರುವಂತೆ ಉಲ್ಲೇಖ (1)ರಲ್ಲಿ ಓದಲಾದ ದಿನಾಂಕ 9–6–2005ರ ಆದೇಶದಲ್ಲಿ ಮಾನ್ಯ ಸಭಾಪತಿ, ಮಾನ್ಯ ವಿರೋಧಿ ಪಕ್ಷದ ನಾಯಕರು ಹಾಗೂ ಮಾನ್ಯ ಸರ್ಕಾರೀ ಮುಖ್ಯ ಸಚೇತಕರ ಆಪ್ತ ಸಿಬ್ಬಂದಿ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗದವರಿಗೆ ವಿಶೇಷ ಭತ್ಯೆಯನ್ನು ಮಂಜೂರು ಮಾಡಿರುವಂತೆ ಮಾನ್ಯ ಉಪ ಸಭಾಪತಿಯವರ ಆಪ್ತ ಸಿಬ್ಬಂದಿ ಶಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಬ್ಬಂದಿ ವರ್ಗದವರಿಗೂ ವಿಶೇಷ ಭತ್ಯೆಯನ್ನು ಮಂಜೂರು ಮಾಡಲು ಕ್ರಮ ಕೈಗೊಳ್ಳಬೇಕೆಂದು ಕೋರಿದ್ದಾರೆ. ಅದರಂತೆ, ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಇ ಎಸ್‌ಆರ್‌ಪಿ 2007, ದಿನಾಂಕ: 6ನೇ ಜೂನ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಮೇಲೆ (2)ರಲ್ಲಿ ಓದಲಾದ ದಿನಾಂಕ 21–11–2006ರ ಆದೇಶದಲ್ಲಿ ತಿದ್ದುಪಡಿ ಮಾಡಿರುವಂತೆ, ಮೇಲೆ (1)ರಲ್ಲಿ ಓದಲಾದ ದಿನಾಂಕ: 9–6–2005ರ ಆದೇಶವನ್ನು ಈ ಕೆಳಗೆ ಸೂಚಿಸಿರುವಷ್ಟು ಮಟ್ಟಿಗೆ ಮಾರ್ಪಡಿಸಲು ಸರ್ಕಾರವು ಆದೇಶಿಸಿದೆ.

ಕ್ರಮ ಸಂಖ್ಯೆ 19ರಲ್ಲಿ **"ಕರ್ನಾಟಕ ವಿಧಾನ ಮಂಡಲ"** ಶೀರ್ಷಿಕೆಯಡಿ, ಉಪ ಶೀರ್ಷಿಕೆ (1ಬಿ) ಅಡಿ (ಎ) ನಲ್ಲಿ ಮಾಡಿರುವ ನಮೂದುಗಳ ನಂತರ, ಈ ಕೆಳಕಂಡ ನಮೂದುಗಳನ್ನು (ಬಿ) ಎಂದು ಸೇರಿಸಿಕೊಳ್ಳತಕ್ಕದ್ದು.

| | |
|---|---|
| (ಬಿ) ಆಪ್ತ ಸಿಬ್ಬಂದಿ ವರ್ಗ:<br>ಸಹಾಯಕ / ಹಿರಿಯ ಸಹಾಯಕ/ ಶೀಘ್ರಲಿಪಿಗಾರ/ ಹಿರಿಯ ಶೀಘ್ರಲಿಪಿಗಾರ | 75 |
| ಕಿರಿಯ ಸಹಾಯಕ/ ಬೆರಳಚ್ಚುಗಾರ ಹಿರಿಯ ಬೆರಳಚ್ಚುಗಾರ | 50 |

ಈ ಆದೇಶಗಳು 1ನೇ ಜೂನ್ 2005ರಿಂದ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1164

**ಎನ್.ಟಿ ನಾಯ್ಕ್**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು–2)

## FOREST, ECOLOGY AND ENVIRONMENT SECRETARIAT

**Sub :** Diversion of 0.973 ha. of forest land for construction of transmission line in Metkalgudda and Doddinaberu RF in Kundapura Division in favour of M/s. Shamili Hydel Power Project Private Limited, Udupi.

**Read :**
1. Letter No. A5(3) GFL.CR.4/07-08, Dated: 22-6-2007 of Principal Chief Conservator of Forests, Bangalore.
2. State Government letter No. FEE 84 FLL 2007, dated: 10-7-2007.
3. Letter No. 4-KRB383/2007-BAN/532, dated: 3-8-2007 of the Government of India, Ministry of Environment and Forests, Regional Office, South Zone, Bangalore.
4. State Government letter No. FEE 84 FLL 2007, dated: 16-8-2007.
5. Letter No.4-KRB 383/2007-BAN/676, dated: 22-8-2007 of Government of India, Ministry of Environment and Forests, Regional Office, South Zone, Bangalore.

**Preamble:**

The Principal Chief Conservator of Forests, Bangalore vide his letter dated 22-6-2007 read at (1) above had submitted the proposal under Section 2 of The Forest (Conservation) Act, 1980 for diversion of 0.973 ha. of forest land in Metkalgudda and Doddinaberu RF in Kundapura Division for construction of transmission line in favour of M/s. Shamili Hydel Power Project Private Limited, Udupi subject to certain conditions.

Accordingly, the proposal was recommended to Government of India, Ministry of Environment and Forests, Regional Office (South Zone), Bangalore vide State Government letter dated 10-7-2007 read at (2) above.

The Government of India, Ministry of Environment and Forests, Bangalore vide their letter dated 3-8-2007 read at (3) above have given in principle approval (Stage-I) for diversion of 0.973 ha. of fresh

forest land and re-diversion of 0.957 ha. of forest land subject to fulfillment of certain conditions and the same was communicated to the Principal Chief Conservator of Forests, Bangalore for compliance.

The Principal Chief Conservator of Forests, Bangalore vide his letter dated 9-8-2007 furnished his compliance report and the same has been sent to Government of India vide State Government letter dated: 16-8-2007 read at (4) above.

Government of India Ministry of Environment and Forests, Regional Office (South Zone), Bangalore vide their letter dated 22-8-2007 read at (5) above have conceyed their approval (Stage-II) under Section 2 of The Forest (Conservation) Act, 1980 for diversion 0.973 ha. of fresh forest land and re-diversion of 0.957 ha. of forest land in Metkalgudda and Doddinaberu RF in Kundapura Division for construction of transmission line in favour of M/s. Shamili Hydel Power Project Private Limited, Udupi subject to the certain conditions.

The proposal has been examined in detail and hence the order.

**Government Order No. FEE 84 FLL 2007, Bangalore, Dated 10th September 2007**

In the circumstances explained in the preamble above, Government is pleased to accord approval under Section 2 of Forest (Conservation) Act, 1980 for diversion of 0.973 ha. of fresh forest land and re-diversion of 0.957 ha. of forest land in Metkalgudda and Doddinaberu RF in Kundapura Division for construction of transmission line in favour of M/s. Shamili Hydel Power Project Private Limited, Udupi subject to the following conditions.

1. The legal status of the forest land shall remain unchanged.
2. The funds received from the user agency towards NPV under this project shall be transferred to Ad-hoc CAMPA in account number CA 1582 of Corporation Bank, Block-II, CGO Complex, Phase-I, Lodhi Road, New Delhi-110 003.
3. The total forest area utilized for the project shall not exceed 1.93 ha. In case the land is not used for the stipulated purpose, then the area will be resumed by the Forest Department.
4. Only minimum number of trees shall be cut based on actual requirement for laying the KV line.
5. The lease period is for a period of 30 years.
6. The land shall be utilized only for the purpose for which it is released.
7. The user agency has to pay the lease rent as fixed by the Government at the time of sanction and any subsequent orders in this regard.
8. In case the land is not used for the stipulated purpose or when it is no longer needed for the stipulated purpose the area should automatically revert back to Forest Department.
9. The Karnataka Forest Act 1963 and Rules 1969 will be applicable for any violation.
10. If the land is not utilized for the purpose within 2 years and also if any violation is found of the stipulated conditions, the forest land shall be forfeited to department after due approval from Government by the Conservator of Forests under Section 82 (read with section 69 of Karnataka Forest Rules) of Karnataka Forest Act, 1963.
11. The user agency shall pay the extraction and transportation charges of trees as estimated by the Deputy Conservator of Forests from the proposes land.
12. The user agency shall pay the Net Present Value (NPV) fixed by the Govt. Notification No. FEE 247 FGL 2002 dated 17-1-2004.
13. The user agency shall abide by all the conditions imposed upon by Government of India, Government of Karnataka and Principal Chief Conservator of Forests.
14. Any other condition to be stipulated by / Government of India/ State Government / Principal Chief Conservator of Forests, Karnataka in the interest of conservation of forests.

By order and in the name of the Governor of Karnataka,

PR. 1677

**P.R. KALAVATHI**

Under Secretary to Government,

Forest, Ecology and Environment Department.

ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕೆ.ಐ.ಎ.ಡಿ.ಬಿ.ಯಿಂದ ಭೋಗ್ಯ ಹಾಗೂ ಕ್ರಯ ಆಧಾರದ ಮೇಲೆ ಜಮೀನಿನ ಹಂಚಿಕೆ–ಹಸ್ತಾಂತರಣ/ ಕ್ರಯ ಪತ್ರ ಮಾಡಿಕೊಡುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು, ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಅಧಿನಿಯಮ 1966ರ ಕಲಂ 28(1) ಮತ್ತು 28(4)ರ ಅಡಿಯಲ್ಲಿ ಅಧಿಸೂಚನೆಗಳನ್ನು ಹೊರಡಿಸಿ ಸ್ವಾಧೀನಪಡಿಸಿಕೊಂಡ ಜಮೀನಿನಲ್ಲಿ ರಚಿಸಿದ ಕೈಗಾರಿಕಾ ಪ್ರದೇಶಗಳಲ್ಲಿ ಕೈಗಾರಿಕಾ ಮೂಲಭೂತ ಸೌಲಭ್ಯಗಳನ್ನು ಒದಗಿಸಿ ಕೈಗಾರಿಕೆಗಳ ಸ್ಥಾಪನೆಗಾಗಿ ಕೈಗಾರಿಕಾ ಪ್ರದೇಶಗಳನ್ನು / ಕೈಗಾರಿಕಾ ನಿವೇಶನಗಳನ್ನು ಹಂಚಿಕೆ ಮಾಡುವ ಕಾರ್ಯಗಳನ್ನು ನಿರ್ವಹಿಸುತ್ತಿರುತ್ತದೆ. ಮಂಡಳಿಯು ತನ್ನ ಈ ಕಾರ್ಯಗಳನ್ನು ಕಾರ್ಯಗತಗೊಳಿಸುವಾಗ ತನ್ನ ಯಾವುದೇ ಕಾರ್ಯಚಟುವಟಿಕೆಯ ಪಾಲನೆಗಾಗಿ ಅಗತ್ಯವೆಂದು ಭಾವಿಸಬಹುದಾದ ಚರ ಮತ್ತು ಸ್ಥಿರ ಸ್ವತ್ತನ್ನು ಸ್ವಾಧೀನಪಡಿಸಿಕೊಳ್ಳಲು ಮತ್ತು ಧಾರಣೆ ಮಾಡಲು (hold) ಮತ್ತು ಮೇಲೆ ಹೇಳಿದ ಅಧಿನಿಯಮದ 14ರ ಅಡಿಯಲ್ಲಿ ಮತ್ತು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ ನಿಯಮ 1966ರ ಕಲಂ 5ರ ಅಡಿಯಲ್ಲಿ ಮಂಡಳಿಯು ಸೂಕ್ತವೆಂದು ಭಾವಿಸಬಹುದಾದಂತಹ ಷರತ್ತುಗಳ ಮೇಲೆ ಯಾವುದೇ ಸ್ವತ್ತನ್ನು ಭೋಗ್ಯ ಮಾಡಲು, ಮಾರಾಟ ಮಾಡಲು ಮತ್ತು ವಿನಿಮಯ ಮಾಡಲು ಅಥವಾ ಬೇರೆ ರೀತಿಯಲ್ಲಿ ಹಸ್ತಾಂತರಣ ಮಾಡಲು ಅಧಿಕಾರವನ್ನು ಹೊಂದಿರುತ್ತದೆ. ಇದಲ್ಲದೆ, ಮಂಡಳಿಯು ಸದರಿ ಅಧಿನಿಯಮದ ಕಲಂ 14(ಡಿ)ರ ಅಡಿಯಲ್ಲಿ ಕೈಗಾರಿಕೆಗಳಿಗಾಗಿ ಕಟ್ಟಡಗಳನ್ನು ಭೋಗ್ಯದ ಮೇಲೆ ಒದಗಿಸಲು, ಅಥವಾ ಮಾರಾಟ ಮಾಡಲು ಅಥವಾ ಭೋಗ್ಯ ಮಾಡಲು ಅಥವಾ ಭೋಗ್ಯ ಹಾಗೂ ಮಾರಾಟದ ಮೇಲೆ ಒದಗಿಸಲು ಅಧಿಕಾರವನ್ನು ಹೊಂದಿರುತ್ತದೆ.

2) 1966ನೇ ಸಾಲಿನಲ್ಲಿ ಪ್ರಾರಂಭಗೊಂಡ ಅಂದಿನಿಂದ ಮಂಡಳಿಯು ಕೈಗಾರಿಕಾ ಪ್ರದೇಶದಲ್ಲಿ ಮಾಡುವ ಹಂಚಿಕೆಯ ಬಗ್ಗೆ 11 ವರ್ಷಗಳ ಅವಧಿಯ ಭೋಗ್ಯಾವಧಿಯ ಷರತ್ತನ್ನು ಮತ್ತು ಏಕಘಟಕ ಸಂಕೀರ್ಣಗಳಿಗೆ 21 ವರ್ಷಗಳ ಭೋಗ್ಯಾವಧಿ ಷರತ್ತನ್ನು ವಿಧಿಸುತ್ತಿತ್ತು. ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ದಿನಾಂಕ: 15–12–1998ರಲ್ಲಿ ನಡೆದ ತನ್ನ ಸಭೆಯಲ್ಲಿ ಏಕಘಟಕ ಸಂಕೀರ್ಣಗಳು ಒಳಗೊಂಡಂತೆ ಎಲ್ಲಾ ಹಂಚಿಕೆ ಪ್ರಕರಣಗಳಲ್ಲಿ ಜಮೀನನ್ನು ವಶಕ್ಕೆ ನೀಡಿದ ದಿನಾಂಕದ ಲಾಗಾಯ್ತು 6 ವರ್ಷಗಳ ಅವಧಿಯ ಭೋಗ್ಯಾವಧಿ ಮಾಡುವ ಷರತ್ತನ್ನು ವಿಧಿಸಲು ಠರಾವು ಮಾಡಿರುತ್ತದೆ. ಮತ್ತು ಈ ಕೆಳಕಂಡ ಎಲ್ಲಾ ಷರತ್ತುಗಳನ್ನು ಪೂರೈಸಿದ್ದಲ್ಲಿ ಕ್ರಮ ಪತ್ರವನ್ನು ಮಾಡಿ ಕೊಡುವ ಬಗ್ಗೆ ಭೋಗ್ಯ ಹಾಗೂ ಮಾರಾಟ ಒಪ್ಪಂದದಲ್ಲಿ ಉಪಬಂಧವನ್ನು ಮಾಡಲಾಗಿತ್ತು.

1) ಭೋಗ್ಯ ಹಾಗೂ ಕ್ರಯ ಒಪ್ಪಂದ ಪತ್ರದಲ್ಲಿ ವಿಧಿಸಿರುವ ಷರತ್ತುಗಳ ಅನುಸಾರ ಜಮೀನನ್ನು ಬಳಕೆ ಮಾಡಿರಬೇಕು. (utilized)

2) ಭೂದರಪರಿಹಾರ ಇತ್ಯರ್ಥ ಬಾಕಿ ಇರಬಾರದು.

3) ಅಂತಿಮ ದರವನ್ನು ನಿರ್ಧಾರಣೆ ಮಾಡಿರಬೇಕು.

3) ದಿನಾಂಕ: 15–12–98ರಂದು ನಡೆದ ಮಂಡಳಿಯ ಸಭೆಯ ನಿರ್ಣಯದೊಂದಿಗೆ ಓದಿ ದಿನಾಂಕ: 6–11–98ರಂದು ನಡೆದ ಮಂಡಳಿಯ ಸಭೆಯ ನಿರ್ಣಯದ ಅನುಸಾರ ಪ್ರಸ್ತುತ ಜಮೀನಿನ ಅಂತಿಮ ಭೂದರವನ್ನು ನಿಗದಿಗೊಳಿಸಿರುವ ಮತ್ತು ಜಮೀನು ಬಳಕೆಯು ತೃಪ್ತಿಕರವಾಗಿ ಇರುವ ಪ್ರಕರಣಗಳಲ್ಲಿ ಭೋಗ್ಯದ ಅವಧಿಯನ್ನು ಕಡಿಮೆಗೊಳಿಸಿ ಕ್ರಯ ಪತ್ರವನ್ನು ಮಾಡಿಕೊಡಲಾಗುತ್ತಿದೆ. ಹಾಗೆಯೇ ಭೂಹಂಚಿಕೆ ಪಡೆದಿರುವವರು 6 ವರ್ಷ ಅವಧಿಯ ಒಳಗೆ ಶುದ್ಧ ಕ್ರಯ ಪತ್ರವನ್ನು ಮಾಡಿಸಿಕೊಳ್ಳಬಹುದಾಗಿದೆ.

4) ಮಂಡಳಿಯು ಅನುಸರಿಸುತ್ತಿರುವ ಈ ಉದಾರ ನೀತಿಯಿಂದಾಗಿ ಕೆಲವು ಭೂಹಂಚಿಕೆ ಪಡೆದಿರುವವರು ವಿಶೇಷವಾಗಿ ಬೆಂಗಳೂರು, ಮೈಸೂರು ಮತ್ತು ಮಂಗಳೂರಿನಲ್ಲಿ ಮತ್ತು ಸುತ್ತಮುತ್ತ ಪ್ರದೇಶಗಳಲ್ಲಿ ಜಮೀನಿನ ಬೆಲೆಯಲ್ಲಿ ತೀವ್ರ ಹೆಚ್ಚಳ ಉಂಟಾಗಿರುವುದರಿಂದ ಸಟ್ಟ (speculation) ವ್ಯಾಪಾರಕ್ಕಾಗಿ ಸಂಭವನೀಯವಾಗಿ ದುರುಪಯೋಗ ಮಾಡಿಕೊಳ್ಳುವುದನ್ನು ಸರ್ಕಾರವು ಮನಗಂಡಿರುತ್ತದೆ.

5) ಈ ಕ್ರಯಪತ್ರ ಮಾಡಿಕೊಡುವ ಉದ್ದೇಶಕ್ಕಾಗಿ ಭೋಗ್ಯಾವಧಿಯನ್ನು ಕಡಿಮೆಗೊಳಿಸುವ ಉಪಬಂಧವನ್ನು ದುರುಪಯೋಗ ಮಾಡಿಕೊಳ್ಳುವ ಸಂಭವನೀಯತೆ ಇರುವುದರಿಂದ ಸ್ಥಿತಿಯನ್ನು ಗಂಭೀರವಾಗಿ ಪುನರಾವಲೋಕಿಸಲಾಗಿದೆ. ಮತ್ತು ಈ ಹಿಂದಿನಂತೆ ನಿರ್ದಿಷ್ಟ ಭೋಗ್ಯಾವಧಿ ಪೂರ್ಣಗೊಳಿಸಿದ ನಂತರವೇ ಮತ್ತು ಜಮೀನನ್ನು ಪೂರ್ಣವಾಗಿ ಬಳಕೆ ಮಾಡಿಕೊಂಡಿರುವ ಹಾಗೂ ಯೋಜನೆಯನ್ನು ತೃಪ್ತಿಕರವಾಗಿ ಕಾರ್ಯಗತಗೊಳಿಸಿರುವ ಬಗ್ಗೆ ತೃಪ್ತಿಯಾದ ನಂತರವೇ ಕ್ರಯ ಪತ್ರವನ್ನು ಮಾಡಿಕೊಡುವ ಈ ಹಿಂದಿನ ಉಪಬಂಧವನ್ನು ಪುನಃ ಜಾರಿಗೊಳಿಸುವ ಅಗತ್ಯತೆಯನ್ನು ಸರ್ಕಾರವು ಮನಗಂಡಿರುತ್ತದೆ.

6) ಇದರಲ್ಲಿ ಪ್ರಸ್ತಾಪಿಸಿರುವಂತೆ ಯೋಜನೆಯನ್ನು (ಪ್ರಾಜೆಕ್ಟ್) 10 ವರ್ಷಗಳ ಒಳಗೆ ಪೂರ್ಣಗೊಳಿಸಿದ್ದಲ್ಲಿ, ಯೋಜನೆಯನ್ನು ಕಾರ್ಯಗತಗೊಳಿಸಿದ ನಂತರ ಭೋಗ್ಯ ಹಾಗೂ ಮಾರಾಟ ಒಪ್ಪಂದದಲ್ಲಿ ಸೂಕ್ತವಾದ ಉಪಬಂಧವನ್ನು

ಸೇರಿಸಿ ಕೆ.ಐ.ಎ.ಡಿ.ಬಿ.ಯ ಪೂರ್ವಾನುಮೋದನೆಯೊಂದಿಗೆ ಕೈಗಾರಿಕೆಗೆ ಕೈಗಾರಿಕಾ ನಿವೇಶನವನ್ನು (premises) ಬೇರೆ ವ್ಯಕ್ತಿಗೆ ಅಥವಾ ಸಂಸ್ಥೆಗೆ (entity) ಉಪಭೋಗ್ಯಮಾಡಲು / ಭೋಗ್ಯಮಾಡುವ ಸೌಲಭ್ಯವನ್ನು ಒದಗಿಸಲಾಗುವುದು. 10 ವರ್ಷಗಳ ಅವಧಿಯನ್ನು ಪರಿಗಣನೆಮಾಡುವ ಉದ್ದೇಶಗಳಿಗಾಗಿ ಜಮೀನನ್ನು ಸುಪುರ್ದು ಮಾಡಿದ ದಿನಾಂಕದಿಂದ ಪರಿಗಣಿಸತಕ್ಕದ್ದಾಗಿರುತ್ತದೆ.

7) ಕೆ.ಐ.ಎ.ಡಿ.ಬಿ. ಯು ಈ ಬಗ್ಗೆ ಆಗಾಗ್ಗೆ ಬದಲಾವಣೆ ಮಾಡುವುದು ಬಹಳ ಆರೋಗ್ಯಕರ ಚಿಹ್ನೆಯಾಗಿರುವುದಿಲ್ಲ. ಸಾಧಾರಣತಃ ಎಲ್ಲಾ ಉದ್ದಿಮೆದಾರರಿಗೆ ಮಹತ್ವಪೂರ್ಣವಾದ ಇಂಗಿತಾರ್ಥವನ್ನು ಹೊಂದಿರುವ ಈ ವಿಷಯದ ಬಗ್ಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಅನುಸರಿಸುತ್ತಿರುವ ನೀತಿಯಲ್ಲಿ ಸ್ಥಿರತೆಯನ್ನು ನೆಲೆಸುವಂತೆ ಮಾಡುವ ನಿಟ್ಟಿನಲ್ಲಿ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಐ 410 ಎಸ್‌ಪಿಕ್ಯೂ 2007, ಬೆಂಗಳೂರು, ದಿನಾಂಕ: 3ನೇ ಸೆಪ್ಟೆಂಬರ್ 2007.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶಗಳ ಹಿನ್ನೆಲೆಯಲ್ಲಿ ಅನುಸರಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

1) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಕೈಗಾರಿಕೆಗಳಿಗೆ (ಕೈಗಾರಿಕಾ ಪ್ರದೇಶಗಳು / ಏಕಘಟಕ ಸಂಕೀರ್ಣಗಳು ಸೇರಿದಂತೆ) ಮಾಡಲಾಗುವ ಹಂಚಿಕೆಗಳು ಭೋಗ್ಯ ಹಾಗೂ ಮಾರಾಟದ ಆಧಾರದ ಮೇಲೆ ಇರತಕ್ಕದ್ದು.

2) ಒಪ್ಪಂದದಲ್ಲಿ ನಮೂದಿಸುವ ಭೋಗ್ಯ ಹಾಗೂ ಮಾರಾಟ ಒಪ್ಪಂದದ ಕಾಲಾವಧಿಯು 10 ವರ್ಷಗಳು ಆಗಿರತಕ್ಕದ್ದು.

3) ಭೋಗ್ಯ ಹಾಗೂ ಕರ ಒಪ್ಪಂದವು 10 ವರ್ಷಗಳ ಕಾಲಾವಧಿಗೆ ಭೋಗ್ಯ ಹಾಗೂ ಕ್ರಯ ಒಪ್ಪಂದವಾಗಿ ಮುಂದುವರೆಯತಕ್ಕದ್ದು. ಮತ್ತು ಜಮೀನಿನ ಸುಪುರ್ದನ್ನು ನೀಡುವ ದಿನಾಂಕದ ಲಾಗಾಯ್ತು 10 ವರ್ಷಗಳ ಅವಧಿ ಮುಕ್ತಾಯವಾಗುವ ಮೊದಲು ಶುದ್ಧ ಕ್ರಯಪತ್ರವನ್ನು ಮಾಡಿಕೊಡತಕ್ಕದ್ದಲ್ಲ.

4) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯು ಶುದ್ಧ ಕ್ರಯಪತ್ರವನ್ನು ಈ ಕೆಳಕಂಡ ಷರತ್ತುಗಳನ್ನು ಪೂರೈಸಿದ್ದಲ್ಲಿ ಮಾತ್ರ ಮಾಡಿಕೊಡತಕ್ಕದ್ದು.

   (i) ಹಂಚಿಕೆ ಮಾಡಿದ ಜಮೀನನ್ನು ಭೋಗ್ಯ ಹಾಗೂ ಕ್ರಯ ಒಪ್ಪಂದದಲ್ಲಿ ವಿಧಿಸಿದ ಸೂತ್ರಗಳ ಅನುಸಾರ (norms) ಬಳಕೆ ಮಾಡುವುದು.

   (ii) ಪರಿಹಾರ ಮೊಬಲಗಿನ ಇತ್ಯರ್ಥದ ಬಗ್ಗೆ ಯಾವುದೇ ಪ್ರಕರಣಗಳು ಇತ್ಯರ್ಥ ಬಾಕಿ ಇರಬಾರದು. ಅಥವಾ ಶುದ್ಧ ಕ್ರಯಪತ್ರಗಳನ್ನು ಮಾಡಿಕೊಡುವ ಮೂಲಕ ಲಭ್ಯವಾಗುವ ಜಮೀನಿನ ಹಂಚಿಕೆಯ ಬಗ್ಗೆ ಯಾವುದೇ ಪ್ರಕರಣಗಳು ಇತ್ಯರ್ಥ ಬಾಕಿ ಇರಬಾರದು.

   (iii) ಜಮೀನಿನ ಅಂತಿಮ ದರವು ನಿರ್ಧಾರಿತವಾಗಿರಬೇಕು.

   (iv) ಸಂಬಂಧಪಟ್ಟ ವ್ಯಕ್ತಿ/ ಕಂಪನಿಯು ಕೆಐಎಡಿಬಿಗೆ ಸಂದಾಯವಾಗಬೇಕಾದ ಎಲ್ಲಾ ಬಾಕಿಗಳನ್ನು ಪೂರ್ಣವಾಗಿ ಚುಕ್ತಾ ಮಾಡಿರಬೇಕು.

5) ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ತೃಪ್ತಿಯಾಗುವ ಮಟ್ಟಕ್ಕೆ ಯೋಜನೆ (project) ಯನ್ನು ಅನುಷ್ಠಾನಗೊಳಿಸುವ ಮೊದಲು ಉಪಭೋಗ್ಯ / ಭೋಗ್ಯಧಾರಣಾ ಹಕ್ಕುಗಳ ವರ್ಗಾವಣೆಗೆ ಅನುಮತಿಯನ್ನು ನೀಡತಕ್ಕದ್ದಲ್ಲ.

6) ಭೋಗ್ಯ ಹಾಗೂ ಮಾರಾಟ ಒಪ್ಪಂದದ ಕಾಲಾವಧಿಯ 10 ವರ್ಷಗಳು ಸಮಾಪ್ತಿಯಾಗುವ ಮೊದಲು ಆದರೆ ಭೋಗ್ಯ ಹಾಗೂ ಮಾರಾಟ ಒಪ್ಪಂದದ ಅನುಸಾರ ಯೋಜನೆ (project) ಯನ್ನು ಅನುಷ್ಠಾನಗೊಳಿಸಿದ ನಂತರ ಜಮೀನನ್ನು ಹಂಚಿಕೆ ಪಡೆದವರು / ಜಮೀನನ್ನು ವರ್ಗಾವಣೆ ಮೂಲಕ ಪಡೆದವರು (allottee / transferee) ಕೆ.ಐ.ಎ.ಡಿ.ಬಿ. ಯ ಪೂರ್ವ ಅನುಮೋದನೆ ಪಡೆದು ಇತರೆ ಯಾವುದೇ ಕಂಪನಿ / ವ್ಯಕ್ತಿಗಳಿಗೆ ಭೋಗ್ಯಧಾರಣೆ ಹಕ್ಕುಗಳನ್ನು ಉಪಭೋಗ್ಯ ಮಾಡಲು ಅಥವಾ ವಹಿಸಿಕೊಡಬಹುದಾಗಿರುತ್ತದೆ (assign). ಇಂತಹ ವರ್ಗಾವಣೆ ಅಥವಾ ಉಪಭೋಗ್ಯವನ್ನು ಕೆ.ಐ.ಎ.ಡಿ.ಬಿ.ಯು ಈ ಕೆಳಕಂಡ ಅಂಶಗಳ ಬಗ್ಗೆ ಸಂತೃಪ್ತಿಯನ್ನು ಹೊಂದಿದ ನಂತರವೇ ಇಂತಹ ವರ್ಗಾವಣೆ ಅಥವಾ ಉಪಭೋಗ್ಯವನ್ನು ಮಾಡತಕ್ಕದ್ದಾಗಿದೆ.

   (i) ಜಮೀನನ್ನು ವರ್ಗಾವಣೆ ಮೂಲಕ ಪಡೆದವರು ಎಸ್.ಹೆಚ್.ಎಲ್.ಸಿ.ಸಿ./ ಎಸ್.ಎಲ್.ಎಸ್.ಡಬ್ಲ್ಯೂ.ಸಿ.ಸಿ./ ಡಿ.ಎಲ್.ಎಸ್.ಡಬ್ಲ್ಯೂ.ಸಿ.ಸಿ. ಮುಖಾಂತರ ಕೆ.ಐ.ಎ.ಡಿ.ಬಿ. ಯು ಮೂಲತಃ ಅನುಮೋದಿಸಿದಂತೆ ಕೈಗಾರಿಕೆಯನ್ನು ನಡೆಸುವ ಬಗ್ಗೆ.

   (ii) ಜಮೀನನ್ನು ವರ್ಗಾವಣೆ ಮೂಲಕ ಪಡೆದವರು ಮೂಲತಃ ಅನುಮೋದಿತ ಯೋಜನೆಯ ವ್ಯಾಪ್ತಿಯನ್ನು ಬಿಟ್ಟು ಕೈಗಾರಿಕಾ ಚಟುವಟಿಕೆಯನ್ನು ವಿಸ್ತರಿಸಲು ಇಚ್ಛಿಸಿದ್ದಲ್ಲಿ ಅಥವಾ ಹೊಸ

ಯೋಜನೆಯನ್ನು ಕಾರ್ಯಗತಗೊಳಿಸಲು ಇಚ್ಛಿಸಿದ್ದಲ್ಲಿ, ಯೋಜನೆಯನ್ನು ಎಸ್.ಹೆಚ್.ಎಲ್.ಸಿ.ಸಿ. / ಎಸ್.ಎಲ್.ಎಸ್.ಡಬ್ಲ್ಯೂ.ಸಿ.ಸಿ. / ಡಿ.ಎಲ್.ಎಸ್.ಡಬ್ಲ್ಯೂ.ಸಿ.ಸಿ. ಯಿಂದ ಅನುಮೋದನೆಯನ್ನು ಪಡೆಯತಕ್ಕದ್ದು.

(iii) ಕೆ.ಐ.ಎ.ಡಿ.ಬಿ. ಗೆ ಸಂದಾಯವಾಗಬೇಕಾದ ಯಾವುದೇ ಮೊಬಲಗು ಬಾಕಿಯಿದ್ದಲ್ಲಿ ಇಂತಹ ಉಪಭೋಗ್ಯ ಅಥವಾ ವರ್ಗಾವಣೆಯನ್ನು ಕೆ.ಐ.ಎ.ಡಿ.ಬಿ.ಯು ಅನುಮತಿಸತಕ್ಕದ್ದಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1678

**ಎಸ್. ಲೋಕನಾಥರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ, (ಕೈ.ಅ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಆರ್ಥಿಕ ಸಚಿವಾಲಯ

**ಸಂಖ್ಯೆ: ಆಇ 4 ಬಿಇಎಂ 2007, ಬೆಂಗಳೂರು, ದಿನಾಂಕ: 10ನೇ ಸೆಪ್ಟೆಂಬರ್, 2007**

**ತಿದ್ದೋಲೆ**

**ವಿಷಯ :** ಸರ್ಕಾರದ ಆಡಳಿತ ವೆಚ್ಚಗಳಲ್ಲಿ ಮಿತವ್ಯಯ ಸಾಧಿಸುವ ಬಗ್ಗೆ –ದೂರವಾಣಿ ಬಳಕೆಯಲ್ಲಿ ಮಿತವ್ಯಯದ ಸಾಧಿಸುವ ಬಗ್ಗೆ.

**ಉಲೇಖ :** 1. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಬಿಇಎಂ 98, ದಿ: 5–11–1998,

2. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಬಿಇಎಂ 98, ದಿ: 23–7–1999.

3. ತಿದ್ದೋಲೆ ಸಂಖ್ಯೆ: ಎಫ್‌ಡಿ 2 ಬಿಇಎಂ 98, ದಿ: 31–7–1999.

4. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಬಿಇಎಂ 98, ದಿ: 27–1–2000.

5. ತಿದ್ದೋಲೆ ಸಂಖ್ಯೆ: ಎಫ್‌ಡಿ 2 ಬಿಇಎಂ 98, ದಿ: 16–8–2000.

1) ಮೇಲಿನ ಉಲ್ಲೇಖ (1)ರಲ್ಲಿರುವ ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 2 ಬಿಇಎಂ 98, ದಿ: 5–11–1998ರಲ್ಲಿ ಸರ್ಕಾರಿ ಅಧಿಕಾರಿಗಳಿಗೆ ಕಛೇರಿಯ ಮತ್ತು ನಿವಾಸದ ದೂರವಾಣಿ ಹೊಂದಲು ಅರ್ಹತೆಯ ಬಗ್ಗೆ ಮಾರ್ಗಸೂಚಿಗಳನ್ನು ನೀಡಲಾಗಿದೆ. ಉಲ್ಲೇಖ (5)ರಲ್ಲಿರುವ ತಿದ್ದೋಲೆ ಸಂಖ್ಯೆ ಎಫ್‌ಡಿ 2 ಬಿಇಎಂ 98, ದಿನಾಂಕ: 16–9–2000ರಲ್ಲಿ ಈ ಆದೇಶವನ್ನು ಮಾರ್ಪಡಿಸಿ ರೂ. 9580–14200 ಹಾಗೂ ಮೇಲ್ಪಟ್ಟ ವೇತನ ಶ್ರೇಣಿಯನ್ನು ಹೊಂದಿರುವ ಅಧಿಕಾರಿಗಳು ಕಛೇರಿ ದೂರವಾಣಿಯನ್ನು ಹೊಂದಲು ಅರ್ಹರಾಗಿರುತ್ತಾರೆ ಮತ್ತು ರೂ. 10620–14960 ಹಾಗೂ ಮೇಲ್ಪಟ್ಟ ವೇತನ ಶ್ರೇಣಿಯನ್ನು ಹೊಂದಿರುವ ಅಧಿಕಾರಿಗಳು ಕಛೇರಿ ಮತ್ತು ನಿವಾಸದ ದೂರವಾಣಿಯನ್ನು ಹೊಂದಲು ಅರ್ಹರಾಗಿರುತ್ತಾರೆ ಎಂದು ತಿಳಿಸಲಾಗಿದೆ.

2) ಸರ್ಕಾರಿ ನೌಕರರ ವೇತನ ಶ್ರೇಣಿಗಳನ್ನು ಪರಿಷ್ಕರಿಸಲಾಗಿರುವುದರಿಂದ ಸದರಿ ತಿದ್ದುಪಡಿಯಲ್ಲಿ ನಿಗದಿಪಡಿಸಲಾದ ವೇತನ ಶ್ರೇಣಿಗಳನ್ನು ಪರಿಷ್ಕರಿಸಬೇಕಾಗುವುದು. ಆದುದರಿಂದ ಆದೇಶ ಸಂಖ್ಯೆ: ಆಇ 2 ಬಿಇಎಂ 1998 ದಿ: 5–11–1998ರ ಶೀರ್ಷಿಕೆ (ಎ) ಮತ್ತು (ಬಿ) ಗಳಲ್ಲಿ ಸೂಚಿಸಿರುವ ವೇತನ ಶ್ರೇಣಿಗಳನ್ನು ಈ ಕೆಳಕಂಡಂತೆ ಮಾರ್ಪಡಿಸಲಾಗಿದೆ.

| ಹಳೆಯ ವೇತನ ಶ್ರೇಣಿ | ಪರಿಷ್ಕೃತ ವೇತನ ಶ್ರೇಣಿ | ಅರ್ಹತೆ |
|---|---|---|
| ಶೀರ್ಷಿಕೆ (ಎ)<br>ರೂ. 9580–14200 | ರೂ. 18150–26925 | ಈ ವೇತನ ಶ್ರೇಣಿ ಹೊಂದಿರುವ ಸರ್ಕಾರಿ ಅಧಿಕಾರಿಗಳು ಕಛೇರಿಯ ದೂರವಾಣಿ ಹೊಂದಲು ಅರ್ಹರಾಗಿರುತ್ತಾರೆ. |
| ಶೀರ್ಷಿಕೆ (ಬಿ)<br>ರೂ. 10620–14960 | ರೂ. 20025–28275 | ಈ ವೇತನ ಶ್ರೇಣಿ ಹೊಂದಿರುವ ಸರ್ಕಾರಿ ಅಧಿಕಾರಿಗಳು ಕಛೇರಿಯ ಹಾಗೂ ನಿವಾಸದ ದೂರವಾಣಿ ಹೊಂದಲು ಅರ್ಹರಾಗಿರುತ್ತಾರೆ. |

ಇದನ್ನು ದಿನಾಂಕ: 1–4–2006 ರಿಂದ ಜಾರಿಗೊಳಿಸತಕ್ಕದ್ದು.

**ಸಿ. ಶಾಮರಾವ್**

ಪಿ.ಆರ್. 1698

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ

(ಎಫ್.ಆರ್. ಮತ್ತು ಬಿ.ಸಿ.ಸಿ.)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2007–08ನೇ ಸಾಲಿನ ಹೊಸ ಯೋಜನೆಗಳಿಗೆ ಅನುಮೋದನೆ ನೀಡುವ ಹಾಗೂ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ: ಕಸಂವಾಪ್ರ 137 ಕಸನಿ 2007, ದಿ: 26–7–07
2. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಪ್ರಾ.ಕಾ.ಲೆಕ್ಕ 1/ 07–08, ದಿನಾಂಕ: 7–5–2007.
3. ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರ ಪತ್ರ: ಕಸನಿ/23/ಕಅ/2007–08, ದಿ: 23–6–07.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ದಿ: 26–7–2007ರ ಸರ್ಕಾರಿ ಆದೇಶದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2007–08ನೇ ಸಾಲಿನ ಹೊಸ ಯೋಜನೆಗಳಿಗೆ ತಾತ್ವಿಕ ಅನುಮೋದನೆ ನೀಡಲಾಗಿದೆ. ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ (2)ರಲ್ಲಿ ಓದಲಾದ ದಿ: 7–5–2007ರ ಪತ್ರದಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2007–08ನೇ ಸಾಲಿನ ಕಾರ್ಯ ಚಟುವಟಿಕೆಗಳಿಗಾಗಿ ನಿಗದಿಪಡಿಸಿರುವ ಅನುದಾನ ರೂ. 150/– ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಈ ಅಂಶಗಳನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 41 ಕೆಒಎಲ್ 2007, ಬೆಂಗಳೂರು, ದಿನಾಂಕ: 13ನೇ ಸೆಪ್ಟೆಂಬರ್ 2007.**

ಕನ್ನಡ ಅಭಿವೃದ್ಧಿ ಪ್ರಾಧಿಕಾರದ 2007–08ನೇ ಸಾಲಿನ ಹೊಸ ಯೋಜನೆಗಳ ಅಂಗವಾಗಿ ಪ್ರಾಧಿಕಾರವು ಸಲ್ಲಿಸಿದೆ ಹಾಗೂ ಈ ಆದೇಶಕ್ಕೆ ಅನುಬಂಧಿಸಲಾದ ಕ್ರಿಯಾ ಯೋಜನೆಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ. ಹಾಗೂ ಕ್ರಿಯಾ ಯೋಜನೆಗೆ ನಿಗದಿಪಡಿಸಿದ 150 ಲಕ್ಷ ರೂ.ಗಳಲ್ಲಿ 50 ಲಕ್ಷ ರೂ.ಗಳನ್ನು (ರೂಪಾಯಿ ಐವತ್ತು ಲಕ್ಷಗಳು ಮಾತ್ರ) ಈ ಕೆಳಕಂಡ ನಿಬಂಧನೆಗೆ ಒಳಪಟ್ಟು ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ಬಿಡುಗಡೆ ಮಾಡಲು ಆಯುಕ್ತರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಅವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಲಾಗಿದೆ.

1) ಯಾವ ಉದ್ದೇಶಕ್ಕಾಗಿ ಅನುದಾನವನ್ನು ಬಿಡುಗಡೆ ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸತಕ್ಕದ್ದು.
2) ಹಣ ಸದ್ವಿನಿಯೋಗವಾಗಿರುವುದಕ್ಕೆ ಹಣ ಬಳಕೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.

ಇದಕ್ಕೆ ತಗಲುವ ವೆಚ್ಚವನ್ನು 2007–08ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–102–1–81–059 (ಯೋಜನೆ) ರಲ್ಲಿ ಭರಿಸತಕ್ಕದ್ದು.

ಆರ್ಥಿಕ ಇಲಾಖೆಯ ಸಹಮತಿಯನ್ನು ಅ.ಟಿ.ಸ.: ಆಇ 1343 ವೆಚ್ಚ 5/ 2007 ದಿ: 20–7–2007 ರಲ್ಲೂ ಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಸಹಮತಿಯನ್ನು ಅ.ಟಿ. ಸಂ:ಯೋಇ 126 ಜಶ 2007, ದಿ: 25–7–2007ರಲ್ಲೂ ಪಡೆದು ಈ ಆದೇಶವನ್ನು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಶಿವರಾಮ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 41 ಕೆಒಎಲ್ 2007, ದಿನಾಂಕ: 139–2007ಕ್ಕೆ**

**ಅನುಬಂಧ**

(ಲೆಕ್ಕಶೀರ್ಷಿಕೆ : 2205–00–102–1–81 ಯೋಜನೆ)

| ಕ್ರ.ಸಂ. | ಯೋಜನೆ ಕಾರ್ಯಕ್ರಮಗಳ ಹೆಸರು | ಮೀಸಲಿರಿಸಲಿರುವ ಅಂದಾಜು ಮೊತ್ತ ರೂ.ಗಳಲ್ಲಿ |
|---|---|---|
| 1 | ಅ) ಗಣಕ ಸಂಬಂಧಿ ಕಾರ್ಯಕ್ರಮಗಳು:<br>1) ಸರ್ಕಾರಿ ನೌಕರರಿಗೆ, ಕನ್ನಡದಲ್ಲಿ ಗಣಕೀಕರಣ ತರಬೇತಿಯನ್ನು ಪ್ರಾಯೋಗಿಕವಾಗಿ 10 ಸ್ಥಳಗಳಲ್ಲಿ ನೀಡಲು ಯೋಜಿಸಲಾಗಿದೆ.<br>1 ಸ್ಥಳಕ್ಕೆ ರೂ. 2.00 ಲಕ್ಷದಂತೆ ಒಟ್ಟು 10 ಸ್ಥಳಕ್ಕೆ ತಗಲುವ ವೆಚ್ಚ ಒಟ್ಟು *ರೂ. 20.00 ಲಕ್ಷ* | 50.00 ಲಕ್ಷ |

| | | |
|---|---|---|
| | 2) 'ಇ' ಆಡಳಿತದಲ್ಲಿ ಸರ್ಕಾರಿ ನೌಕರರಿಗೆ 16 ದಿನಗಳ ತರಬೇತಿ (1 ಶಿಬಿರಕ್ಕೆ 25 ಸರ್ಕಾರಿ ನೌಕರರು), 1 ಶಿಬಿರಕ್ಕೆ ರೂ. 1.60 ಲಕ್ಷದಂತೆ ಒಟ್ಟು 10 ಶಿಬಿರಕ್ಕೆ ತಗಲುವ ವೆಚ್ಚ *ರೂ. 16.00 ಲಕ್ಷ.*<br>3) ಕನ್ನಡದಲ್ಲಿ ಯೂನಿಕೋಡ್ ಹಾಗೂ ಆಸ್ಕಿ ಬಳಕೆಯ ಸಮಸ್ಯೆ ನಿವಾರಣಾ ತಂತ್ರಾಂಶ– *ರೂ. 1.00 ಲಕ್ಷ*<br>4) ಯೂನಿಕೋಡ್ ಸಂಕೇತಗಳು ಕನ್ನಡದ ಅಕ್ಷರಗಳಾಗಿ ಸರಿಯಾಗಿ ಮಾಡುವಿಕೆಗಾಗಿ ತಂತ್ರಾಂಶ *– ರೂ. 1.00 ಲಕ್ಷ*<br>5) ಕೈ ಬರಹ ಮತ್ತು ಮುದ್ರಿತ ಪಟ್ಟಿ ಅಕ್ಷರ ಜಾಣ *– ರೂ. 6.00 ಲಕ್ಷ*<br>6) ಧ್ವನಿ ಸಂಶ್ಲೇಷಣೆ ಮತ್ತು ನುಡಿಜಾಣ ತಂತ್ರಾಂಶಗಳು *– ರೂ. 6.00 ಲಕ್ಷ* | |
| 2 | ಸಾಕ್ಷ್ಯ ಚಿತ್ರ:<br>ವಿದ್ಯುನ್ಮಾನದಲ್ಲಿ / ದೂರದರ್ಶನ ಮಾಧ್ಯಮಗಳಲ್ಲಿ ಕನ್ನಡ ಅನುಷ್ಠಾನದ ಉದ್ಘೋಷಣೆಗಳ ಪ್ರಸಾರ | 10.00 ಲಕ್ಷ |
| 3 | ಅ) ಜಿಲ್ಲಾ ಹಾಗೂ ಅಧೀನ ನ್ಯಾಯಾಲಯಗಳ ಕನ್ನಡದ ತೀರ್ಪುಗಳ ಸಂಕಲನ ಪ್ರಕಟಣೆಗೆ – ರೂ. 5.00 ಲಕ್ಷ<br>ಆ) ಪ್ರತಿ ಜಿಲ್ಲೆಯಲ್ಲಿ ಕನ್ನಡದಲ್ಲಿ ಉತ್ತಮ ತೀರ್ಪು ನೀಡಿದ ಇಬ್ಬರು ನ್ಯಾಯಾಧೀಶರಿಗೆ ಪ್ರತಿ ಜಿಲ್ಲೆಗೆ 2 ರಂತೆ ರೂ. 7,500–00 ಗಳ ನಗದು ಬಹುಮಾನ – ರೂ. 4.05 ಲಕ್ಷ | 9.05 ಲಕ್ಷ |
| 4 | ಕನ್ನಡ ಭಾಷಾ ಬಳಕೆ ಕಾರ್ಯಾಗಾರ (ಪ್ರತಿ ಜಿಲ್ಲೆಗೆ 1 ರಂತೆ) | 8. 00 ಲಕ್ಷ |
| 5 | ಆಡಳಿತದಲ್ಲಿ ಕನ್ನಡ ಅನುಷ್ಠಾನ<br>1) ವಿಚಾರ ಸಂಕಿರಣ, ಕಮ್ಮಟ, ಸಮಾವೇಶ ಇತ್ಯಾದಿ<br>2) ಕನ್ನಡ ಜಾಗೃತಿ ಸಮಿತಿಗಳ ಸದಸ್ಯರುಗಳ ಪ್ರಯಾಣ ಭತ್ಯೆ ಹಾಗೂ ಉಪಸ್ಥಿತಿ ಭತ್ಯೆ, ಕನ್ನಡ ಅನುಷ್ಠಾನಕ್ಕೆ ಸಂಬಂಧಿಸಿದ ಪೂರಕ ಕಾರ್ಯಕ್ರಮಗಳು<br>3) ಶಿಕ್ಷಣದ ಎಲ್ಲಾ ಹಂತಗಳಲ್ಲಿ ಕನ್ನಡ ಅನುಷ್ಠಾನದ ಹಾಗೂ ಸಾಂಸ್ಕೃತಿಕ ವಲಯ, ಸಂಘ ಸಂಸ್ಥೆಗಳಲ್ಲಿ ಕನ್ನಡದ ಸ್ಥಾನಮಾನದ ಬಗ್ಗೆ ಇತರೆ ಅಕಾಡೆಮಿಗಳ ಸಹಯೋಗದಲ್ಲಿ ವಿಚಾರ ಸಂಕಿರಣ, ಸಮಾಲೋಚನೆ ಹಾಗೂ ಸಭೆ ಸಮಾರಂಭಗಳನ್ನು ನಡೆಸುವುದು. | 2.95 ಲಕ್ಷ |
| 6 | ಪಾರಿಭಾಷಿಕ ಪದಕೋಶ ಪ್ರಕಟಣೆ | 5.00 ಲಕ್ಷ |
| 7 | ಇಲಾಖೆಯ ಕೈಪಿಡಿ ಪ್ರಕಟಣೆ ಬಗ್ಗೆ | 5.00 ಲಕ್ಷ |
| 8 | ಕನ್ನಡ ಮಾಧ್ಯಮ ಪ್ರಶಸ್ತಿ –ಎಸ್.ಎಸ್.ಎಲ್.ಸಿ. ಮತ್ತು ಪಿ.ಯು.ಸಿ.ಯಲ್ಲಿ ಕನ್ನಡ ಮಾಧ್ಯಮದಲ್ಲಿ ಓದಿ ಅತಿ ಹೆಚ್ಚು ಅಂಕ ಗಳಿಸಿದ ಜಿಲ್ಲಾವಾರು ಪ್ರಥಮ 10 ವಿದ್ಯಾರ್ಥಿಗಳಿಗೆ ಮಾಧ್ಯಮ ಪ್ರಶಸ್ತಿ | 33.00 ಲಕ್ಷ |
| 9 | ಹೊರ ರಾಜ್ಯದ ಎಂ.ಎ. ಕನ್ನಡ ಸ್ನಾತಕೋತ್ತರ ಪದವೀಧರರಿಗೆ ಪ್ರೋತ್ಸಾಹ ಧನ (ಒಬ್ಬ ವಿದ್ಯಾರ್ಥಿಗೆ ರೂ. 5,000.00ರಂತೆ) | 1.40 ಲಕ್ಷ |
| 10 | ಸರೋಜಿನಿ ಮಹಿಷಿ ವರದಿಯ ಅನುಷ್ಠಾನ<br>1) ವಿಚಾರ ಸಂಕಿರಣ, ಕಮ್ಮಟ, ಸಮಾವೇಶ ಬಹು ಮಾಧ್ಯಮ ಪ್ರಚಾರ, ವರದಿ ಪ್ರಕಟಣೆ<br>2) ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಉದ್ದಿಮೆಗಳ ಹಾಗೂ ಖಾಸಗಿ ಉದ್ದಿಮೆಗಳಲ್ಲಿರುವ ಕನ್ನಡಪರ ಸಂಘ ಸಂಸ್ಥೆಗಳ ಪದಾಧಿಕಾರಿಗಳ ರಾಜ್ಯ ಮತ್ತು ಜಿಲ್ಲಾವಾರು ಸಮಾಲೋಚನಾ ಸಭೆ ಇತ್ಯಾದಿ ನಡೆಸುವ ಬಗ್ಗೆ.<br>3) ಪುಸ್ತಕ ಮರು ಮುದ್ರಣ | 1.00 ಲಕ್ಷ |

| | | |
|---|---|---|
| 11 | ನಮ್ಮ ನಾಡು ನಮ್ಮ ನುಡಿ (3 ದಿನಗಳ 1 ಕಾರ್ಯಕ್ರಮಕ್ಕೆ ರೂ. 10,000.00 ರಂತೆ):<br>ಈ ವರ್ಷ ಸುಮಾರು 30 ನಮ್ಮ ನಾಡು ನಮ್ಮ ನುಡಿ ಕಾರ್ಯಕ್ರಮವನ್ನು ನಡೆಸಲು ಯೋಜಿಸಲಾಗಿದೆ. ಇದನ್ನು ಕನ್ನಡ ಸಂಸ್ಕೃತಿ ನಿರ್ದೇಶನಾಲಯದ ಸಹಯೋಗದೊಂದಿಗೆ ನಡೆಸಲು ಉದ್ದೇಶಿಸಿದೆ. | 3.00 ಲಕ್ಷ |
| 12 | ಕಲಿ ಸವಿಗನ್ನಡ – ಕನ್ನಡ ಬಾರದವರಿಗೆ ಕನ್ನಡ ಕಲಿಸುವ ಕಾರ್ಯಕ್ರಮ<br>ಭಾಷಾ ಅಲ್ಪಸಂಖ್ಯಾತರಿಗೆ ಹಾಗೂ ಕನ್ನಡ ಬಾರದವರಿಗೆ ಕನ್ನಡ ಕಲಿಕಾ ಕೇಂದ್ರಗಳನ್ನು ನಡೆಸಲು ಹಾಗೂ ಮದರಸಾಗಳಲ್ಲಿ ಕನ್ನಡ ಕಲಿಸುವ ಯೋಜನೆ ಬಗ್ಗೆ. (1 ಕಾರ್ಯಕ್ರಮಕ್ಕೆ – ರೂ. 9,000.00ದಂತೆ) | 5.00 ಲಕ್ಷ |
| 13 | ಕನ್ನಡ ಡಿಂಡಿಮ –(ಪ್ರಖ್ಯಾತ ಕವಿಗಳ ನಾಡ ಗೀತೆಗಳ ಗಾಯನ) ಯುವ ಜನತೆಯಲ್ಲಿ ಮತ್ತು ವಿದ್ಯಾರ್ಥಿಗಳಲ್ಲಿ ಅಭಿಮಾನ ಮೂಡಿಸಲು ಸಾಧ್ಯವಾಗುವಂತಹ ಪ್ರಖ್ಯಾತ ಕವಿಗಳ ನಾಡಗೀತೆಗಳ ವಾಚನ ಕಾರ್ಯಕ್ರಮ ನಡೆಸುವ ಬಗ್ಗೆ (1 ಕಾರ್ಯಕ್ರಮಕ್ಕೆ – ರೂ. 3,000.00ದಂತೆ) | 3.00 ಲಕ್ಷ |
| 14 | ಗಡಿ ಉತ್ಸವ ಕಾರ್ಯಕ್ರಮ – 16 ಜಿಲ್ಲೆಗಳು :<br>ಗಡಿ ಉತ್ಸವವನ್ನು ಗಡಿ ಜಿಲ್ಲೆಗಳಾದ ಒಟ್ಟು 16 ಜಿಲ್ಲೆಗಳಲ್ಲಿ ಏರ್ಪಡಿಸುವ ಬಗ್ಗೆ (1 ಜಿಲ್ಲೆಗೆ – ರೂ. 50,000.00 ದಂತೆ) | 8.00 ಲಕ್ಷ |
| 15 | ಕನ್ನಡ ಜಾಗೃತಿ ಸಮಾವೇಶ –<br>ರಾಜ್ಯದ ಒಟ್ಟು 52 ಗಡಿ ತಾ॥ ಪ್ರದೇಶಗಳಲ್ಲಿ ಕನ್ನಡ ಜಾಗೃತಿ ಸಮಾವೇಶ ಏರ್ಪಡಿಸುವ ಬಗ್ಗೆ (ಒಂದು ತಾಲ್ಲೂಕಿಗೆ ರೂ. 5,000.00ದಂತೆ) | 2.60 ಲಕ್ಷ |
| 16 | ಹೊರ ರಾಜ್ಯದ ಗಡಿ ಪ್ರದೇಶದಲ್ಲಿ ಕನ್ನಡ ಪರ ಕಾರ್ಯಕ್ರಮಗಳು – (1 ಕಾರ್ಯಕ್ರಮಕ್ಕೆ ರೂ. 5,000/– ರಂತೆ ಒಟ್ಟು 40 ಕಾರ್ಯಕ್ರಮ) | 2.00 ಲಕ್ಷ |
| 17 | ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿ ಕಛೇರಿಗೆ ಪೀಠೋಪಕರಣಗಳು ಹಾಗೂ ಇತರೆ ಅಗತ್ಯ ವಸ್ತುಗಳ ಖರೀದಿ | 1.00 ಲಕ್ಷ |
| | **ಒಟ್ಟು ರೂ.** | **150.00 ಲಕ್ಷ** |

**ಎಂ.ಎಸ್. ಶಿವರಾಮ್**

ಪಿ.ಆರ್. 1699

ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಶಿಕ್ಷಣ ಸಚಿವಾಲಯ**

**ಸಂಖ್ಯೆ: ಇಡಿ 266 ಎಲ್‌ಐಬಿ 2006, ಬೆಂಗಳೂರು, ದಿನಾಂಕ: 31ನೇ ಆಗಸ್ಟ್ 2007**

**ತಿದ್ದೋಲೆ**

ದಿನಾಂಕ: 7–2–2005ರ ಸರ್ಕಾರದ ಆದೇಶ ಸಂಖ್ಯೆ: ಇಡಿ 1 ಎಲ್‌ಬಿಪಿ 2004ರ ಅನುಬಂಧ–2ರ ಕ್ರಮ ಸಂಖ್ಯೆ 3(15)ರ ನಂತರ ಈ ಕೆಳಕಂಡಂತೆ ಕ್ರಮ ಸಂಖ್ಯೆ 3(15) (ಅ)ನ್ನು ಈ ಮೂಲಕ ಸೇರ್ಪಡಿಸಲಾಗಿದೆ.

"3(15)(ಅ) ಮಕ್ಕಳ ಸಾಹಿತ್ಯದ ಪುಸ್ತಕಗಳನ್ನು ಆಯ್ಕೆ ಮಾಡಲು, ವಿಷಯ ಪರಿಣಿತರನ್ನು ಕೋ–ಆಪ್ಟ್ ಮಾಡಿಕೊಳ್ಳುವುದು".

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1702

**ಎಂ.ಎನ್. ಸೋಮಶೇಖರ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಶಿಕ್ಷಣ ಇಲಾಖೆ